ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇ ಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು ದಾವಣಗೆರೆ ಉಪ ವಿಭಾಗ ದಾವಣಗೆರೆ ಇವರ ಮೂಲಕ ಉಲ್ಲೇಖ (2)ರ ರೀತ್ಯ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು ದಾವಣಗೆರೆ ಇವರೂ ಸಹ ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್:ಡಿವಿಜಿ/ಎಲ್‌ಕ್ಯೂಡಿ/ಸಿ.ಆರ್. 33/2002-03, ದಿನಾಂಕ: 31ನೇ ಅಕ್ಟೋಬರ್ 2003**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎ:2001 ದಿನಾಂಕ: 21.11.2002 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ದಾವಣಗೆರೆ ಜಿಲ್ಲೆಯ ಸಹಕಾರ ಸಂಘಗಳ ಉಪ ನಿಬಂಧಕರು, ವೈ. ರಂಗಪ್ಪ ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಶ್ರೀ ವಿಘ್ನೇಶ್ವರ ಕ್ರೆಡಿಟ್ ಕೋ ಆಪರೇಟೀವ್ ಸೊಸೈಟಿ ಲಿ., ದಾವಣಗೆರೆ, ದಾವಣಗೆರೆ ತಾಲ್ಲೂಕು ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33 (ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು ದಾವಣಗೆರೆ ಉಪ ವಿಭಾಗ ದಾವಣಗೆರೆ ಇವರ ಕಚೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ದಿನಾಂಕ: 31.10.2003 ರಂದು ಈ ಆದೇಶವನ್ನು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್. 1286

**ಸಹಕಾರ ಸಂಘಗಳ ಉಪ ನಿಬಂಧಕರವರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಕೆಗಳು**

**ವಿಷಯ:** ಸಮಾಪನೆಗೊಂಡಿರುವ ಗ್ರಾಮಾಂತರ ಕೈಗಾರಿಕಾ ಸಹಕಾರ ಸಂಘ, ಚಿಕ್ಕವ್ವನಾಗತಿಹಳ್ಳಿ, ದಾವಣಗೆರೆ ತಾಲ್ಲೂಕು, ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:** 1) ಆದೇಶ ಸಂಖ್ಯೆ: ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್/59/2000-01, ದಿನಾಂಕ: 21.3.2001.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು ದಾವಣಗೆರೆ, ಇವರ ಪತ್ರ ದಿನಾಂಕ: 28.10.2003.

**ಪ್ರಸ್ತಾವನೆ:-**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ಕ್ರಮ ಸಂಖ್ಯೆ: ಎಆರ್‌ಡಿ/2182/74-75, ದಿನಾಂಕ: 23.4.1974 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇ ಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು ದಾವಣಗೆರೆ ಉಪ ವಿಭಾಗ ದಾವಣಗೆರೆ ಇವರ ಮೂಲಕ ಉಲ್ಲೇಖ (2)ರ ರೀತ್ಯ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು ದಾವಣಗೆರೆ ಇವರೂ ಸಹ ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್:ಡಿವಿಜಿ/ಎಲ್‌ಕ್ಯೂಡಿ/ಸಿ.ಆರ್. 59/2000-01, ದಿನಾಂಕ: 31ನೇ ಅಕ್ಟೋಬರ್ 2003**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎ:2001 ದಿನಾಂಕ: 21.11.2002 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ದಾವಣಗೆರೆ ಜಿಲ್ಲೆಯ ಸಹಕಾರ ಸಂಘಗಳ ಉಪ ನಿಬಂಧಕರು, ವೈ. ರಂಗಪ್ಪ ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಗ್ರಾಮಾಂತರ ಕೈಗಾರಿಕಾ ಸಹಕಾರ ಸಂಘ ನಿಯಮಿತ ಚಿಕ್ಕವ್ವನಾಗತಿಹಳ್ಳಿ ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33 (ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು ದಾವಣಗೆರೆ ಉಪ ವಿಭಾಗ ದಾವಣಗೆರೆ ಇವರ ಕಚೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ದಿನಾಂಕ: 31.10.2003 ರಂದು ಈ ಆದೇಶವನ್ನು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್. 1287

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಇವರ ನ್ಯಾಯಾಲಯ

## ಇದಕ್ಕೆ ಯಾರು ಸಂಬಂಧಪಟ್ಟವರೋ ಅವರಿಗೆ ನೋಟೀಸ್

ಚಿತ್ರದುರ್ಗ ಅರಣ್ಯ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧ ಕಳ್ಳಸಾಗಾಣಿಕೆಗಾಗಿ ಬಳಸಲಾಗಿದ್ದ ಈ ಕೆಳಕಂಡ ವಾಹನಗಳನ್ನು ಮತ್ತು ಅದರಲ್ಲಿ ತುಂಬಿದ್ದ ಶ್ರೀಗಂಧವನ್ನು ವಶಪಡಿಸಿಕೊಳ್ಳಲಾಗಿದೆ. ವಶಪಡಿಸಿಕೊಳ್ಳಲಾಗಿರುವ ವಾಹನಗಳ ವಿವರ ಈ ಕೆಳಗಿನಂತಿರುತ್ತದೆ.

| ಕ್ರ. ಸಂ. | ವಾಹನದ ಹೆಸರು | ನೋಂದಣಿ ಸಂಖ್ಯೆ | ಇಂಜಿನ್ ನಂ. | ಚಾಸ್ಸಿ ನಂ. | ವಾಹನ ವಶಪಡಿಸಿಕೊಂಡ ದಿನಾಂಕ |
|---|---|---|---|---|---|
| 1 | ಬಜಾಜ್ ಕೆಬಿ-100 ಕವಾಸಾಕಿ ಮೋಟಾರ್ ಬೈಕು | ಸಿಟಿಟಿ-964 | ಡಿಬಿ ಎಂ-96 ಎಫ್ -00481 (ಡೆಲ್ಟಾ ಇಂಜಿನ್) | ಡಿಬಿ ಎಫ್-96 ಎಫ್-00587 | 30.8.1999 |
| 2 | ಅಂಬಾಸಿಡರ್ ಕಾರು | ಕೆಎ-16-ಎಂ-729 (ಎಂವೈಎಕ್ಸ್-1456) | 130907128 | ಜಿ.ಜಿ. 04710 | 4.2.2001 |
| 3 | ಬಜಾಜ್ ಚೇತಕ್ ಸ್ಕೂಟರ್ (ಮಾಡಲ್ 1996) | ಕೆಎ-04-ಇ-6223 | ಈ 06 ಬಿಹೆಚ್-021539 (1996 ಮಾಡಲ್) | 06 ಬಿಜೆ 021024 | 8.7.2001 |
| 4 | ಅಂಬಾಸಿಡರ್ ಕಾರು | ಕೆಎಲ್-11-131 | 6ಇಹೆಚ್-062920 | 111-591684 | 28.10.2001 |
| 5 | ಮಾರುತಿ ಕಾರು | ಕೆಎ-02-ಎಂ-6357 | ಎಫ್8ಬಿಐಎನ್ 204171 | ಎಸ್‌ಬಿ-308 ಐಎನ್-153215 | 10.2.2002 |

ಮೇಲ್ಕಂಡ ವಾಹನಗಳ ಮಾಲೀಕರಿಗೆ ಅಥವಾ ಸಂಬಂಧಪಟ್ಟವರಿಗೆ ಈ ಪ್ರಕಟಣೆಯ ಮೂಲಕ ತಿಳಿಸುವುದೇನೆಂದರೆ, ಮೇಲ್ಕಂಡ ವಾಹನಗಳಿಗೆ ಸಂಬಂಧಿಸಿದ ಅವಶ್ಯಕವಾದ ದಾಖಲಾತಿಗಳೊಂದಿಗೆ ಈ ಪ್ರಕಟಣೆ ಪ್ರಕಟಗೊಂಡ (15) ದಿನದೊಳಗಾಗಿ ಈ ಪ್ರಾಧಿಕಾರಕ್ಕೆ ತಮ್ಮ ಅಹವಾಲುಗಳನ್ನು ಸಲ್ಲಿಸಲು ಈ ಮೂಲಕ ತಿಳಿಯಪಡಿಸಿದೆ.

ಈ ಪ್ರಕಟಣೆ ಪ್ರಕಟಿತಗೊಂಡ ಹದಿನೈದು (15) ದಿನಗಳೊಳಗಾಗಿ ಯಾರೂ ತಮ್ಮ ಅಹವಾಲುಗಳನ್ನು ಸಲ್ಲಿಸದೆ ಇದ್ದ ಪಕ್ಷದಲ್ಲಿ ಸದರಿ ವಾಹನಗಳಿಗೆ ಸಂಬಂಧಿಸಿದ ವಾಹನದ ವಾರಸುದಾರರು ಯಾರೂ ಇಲ್ಲವೆಂದು ಪರಿಗಣಿಸಿ ಕರ್ನಾಟಕ ಅರಣ್ಯ ಕಾಯ್ದೆ-1963ರ ಸೆಕ್ಷನ್-71(ಎ) ಪ್ರಕಾರ ಏಕಪಕ್ಷೀಯವಾಗಿ ಕ್ರಮ ಕೈಗೊಂಡು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಪಿ.ಆರ್. 1288 ಚಿತ್ರದುರ್ಗ ವಿಭಾಗ, ಚಿತ್ರದುರ್ಗ.

## 1ನೇ ಸಂಚಾರ ಎಂ.ಎಂ. ನ್ಯಾಯಾಲಯ, ಬೆಂಗಳೂರು ನಗರ

**ವಿಷಯ:** ಅಮಾನತ್ತು ಪಡಿಸಿರುವ ಮಾಲಿನ ವಾರಸುದಾರರ ಪತ್ತೆಗಾಗಿ ಪ್ರಕಟಣೆ

**ಉಲ್ಲೇಖ:** ಹೆಚ್.ಎ.ಎಲ್. ಪೊಲೀಸ್ ಠಾಣೆಯ 'ಸಿ' ಮಿಸ್ ಸಂಖ್ಯೆ: 423/1991, 318/1994, 337/1999 ಮತ್ತು 794/2000.

ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ ತಮ್ಮಲ್ಲಿ ಕೋರುವುದೇನೆಂದರೆ, ಹೆಚ್.ಎ.ಎಲ್. ಪೊಲೀಸ್ ಠಾಣೆಯಲ್ಲಿ ವಾರಸುದಾರರಿಲ್ಲದೆ ಅಮಾನತ್ತುಪಡಿಸಿಕೊಂಡಿರುವ ಮಾಲುಗಳ ವಾರಸುದಾರರು ಪತ್ತೆಯಾಗಿಲ್ಲದಿದ್ದು ಪತ್ತೆ ಮಾಡಲು ಬೆಂಗಳೂರುನಗರದ ಎಲ್ಲಾ ಪೊಲೀಸ್ ಠಾಣೆಗಳಿಗೂ ಸುತ್ತೋಲೆಯನ್ನು ಕಳುಹಿಸಿ ಪರಿಶೀಲಿಸಲಾಗಿದ್ದು, ಕೇಂದ್ರ ಅಪರಾಧ ದಾಖಲೆ ವಿಭಾಗದಲ್ಲಿಯೂ ಪರಿಶೀಲಿಸಲಾಗಿದ್ದು, ಮಾಲುಗಳ ವಾರಸುದಾರರ ಪತ್ತೆಯಾಗಿರುವುದಿಲ್ಲ. ಆದುದರಿಂದ ಈ ಕೆಳಕಂಡ ಮಾಲುಗಳ ವಾರಸುದಾರರ ಪತ್ತೆಗಾಗಿ ಈ ಪ್ರಕಟಣೆಯನ್ನು ಮಾಡಲಾಗಿದೆ.

| ಕ್ರ. ಸಂ. | ಅಮಾನತ್ತುಪಡಿಸಿದ ದಿನಾಂಕ | 'ಸಿ' ಮಿಸ್ ಸಂಖ್ಯೆ | ಮಾಲು ಪಟ್ಟಿ ಸಂಖ್ಯೆ | ಮಾಲಿನ ವಿವರ |
|---|---|---|---|---|
| 1 | 23.11.1991 | 423/1991 | 106(ಎ)/1991 | ಒಂದು ನೀಲಿ ಬಣ್ಣದ ಲೂನಾಮೋಪೆಡ್ ನಂಬರ್ ಗೊತ್ತಿಲ್ಲ |
| 2 | 11.5.1994 | 318/1994 | 87/1994 | 80 ಕೆ.ಜಿ. ತೂಕದ ಅಲ್ಯುಮಿನಿಯಂ ರಾಡುಗಳು ಮತ್ತು ಪ್ಲೇಟ್‌ಗಳು |
| 3 | 21.5.1999 | 337/1999 | 68/1999 | ಕೆಂಪು ಬಣ್ಣದ ಇಂಡ್ ಸುಜುಕಿ ಮೋಟಾರು ಸೈಕಲ್ ನಂಬರ್ ಸಿ.ಎನ್.ಯು 2837 |
| 4 | 17.12.2000 | 794/2000 | 164/2000 | ಬಿಳಿಯ ಬಣ್ಣದ ಮಾರುತಿ ಕಾರ್ ನಂಬರ್ ಇಲ್ಲ<br>ಇಂಜಿನ್ ನಂ. 17ಬಿ/ಎನ್203130<br>ಚಾಸಿ ನಂ. 8630817/59110 |

1ನೇ ಸಂಚಾರ ಎಂ.ಎಂ. ನ್ಯಾಯಾಲಯ,
ಪಿ.ಆರ್. 1289 ಬೆಂಗಳೂರು ನಗರ

**FORM NO 155 (See Rule 329)**
**(Members Voluntary winding up)**
**E.G. CYBENETICS PRIVATE LIMITED, 79/5, 2nd Cross, Ramaiah Reddy Layout, Nandidurg Road, Bangalore-560 046.**
**Notice convening final meeting of Contributories**

Notice is hereby given in pursuance of section 497/509 that a General Meeting of the Members of the above named Company will be held at 79/5, 2nd cross, Ramaiah Reddy Layout, Nandidurg Road, Bangalore-560 046 at 14th January 2004 at 10 a.m. for the purpose of having an account laid before them showing the manner in which the winding up has been conducted and the property of the company has been disposed of and of hearing of any explanation that may be given by the liquidator and also of determining by a special resolution of the Company, the manner in which the books of accounts and documents of the company and of the liquidator shall be disposed of.

Dated 28th November 2003 **GURVINDER SINGH AHLUWALIA**
PD-122 MANAGING DIRECTOR & LIQUIDATOR

**PUBLIC NOTICE**
**CALICO SOFTWARE (INDIA) PRIVATE LIMITED**
**Registered Office: No. 183, Double Road, Indiranagar, Bangalore-560 097**

Notice is hereby given for general information that the members of Calico Software (India) Private Limited at an Extraordinary General Meeting of the Company held on 28th November 2003 at its Registered Office, have passed the following Special Resolution to wind up the above Company voluntarily:

"RESOLVED THAT having regard to the declaration made by the Board of Directors dated 5th November 2003 and delivered to the Registrar of Companies under section 488 of the Companies Act, 1956, stating that the Company has no debts at the date of declaration thereof, the Company Calico Software (India) Private Limited having its Registered Office at No. 183, Double Road, Indiranagar, Bangalore-560 097, be wound up voluntarily, pursuant to Section 484(1)(b) of the Companies Act, 1956 and the consent of shareholders of the Company be and is hereby accorded for the voluntary winding up of the Company.

RESOLVED FURTHER that Mr. Venkatesh Prabhu, Advocate, be and is hereby appointed as an honorary Liquidator of the Company for the purposes of winding up of the Company pursuant to the provisions of Section 490 of the Companies Act, 1956."

"RESOLVED FURTHER THAT Mr. Venkatesh Prabhu, the honorary Liquidator be and is hereby empowered to exercise all powers as provided in sub-clauses (i) to (iv) of sub-section (2) of Section 457 of the Companies Act, 1956."

Dated 28th November 2003 By Order of the Board
Place: Bangalore **Raman Seshadri**
Director

**THE COMPANIES ACT, 1956**
**FORM NO. 151**
**(See Rule 315)**
**Members' Voluntary Winding-up-Notice of Appointment of Liquidator**
**(Pursuant to section 516)**

| | |
|---|---|
| Name of the Company | CALICO SOFTWARE (INDIA) PRIVATE LIMITED |
| Registration No. | 27932 |
| Authorised Capital | Rs. 2,91,00,000/- |
| Registered Office | No. 183, Double Road, Indiranagar, Bangalore-560 097 |
| Nature of Business | Software Development |
| Name and address of Liquidator | VENKATESH PRABHU, ADVOCATE 1259, 14th Floor, B-Wing, Mittal Towers, MG Road, Bangalore-560 001. |
| Date of Appointment | 28th November 2003 |
| By whom appointed | By a resolution of the shareholders of the Company |

Dated 28th November 2003 **For Calico Software (India) Private Limited**
Place: Bangalore **Liquidator.**
PD-123

## ನಿರ್ದೇಶಕರವರ ಕಛೇರಿ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು

## ಸಾರ್ವಜನಿಕ ಪ್ರಕಟಣೆ

ಸಂಖ್ಯೆ ನಿಪಸಂಇಬ್ಬಂದಿ–1:ಅ:2002-03:03-04 ದಿನಾಂಕ : 20th August 2003

ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000 ದ (2000 ದ ಕರ್ನಾಟಕ ಅಧಿನಿಯಮ 28) ಪ್ರಕರಣ 3 (ಬಿ) ಅಡಿಯಲ್ಲಿ ನಿರ್ದೇಶಕರು, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆಗೆ ಸಂಬಂಧಿಸಿದಂತೆ ಕೆಳಕಂಡ ವಿವರಗಳನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ.

**ಇಲಾಖೆಯ ಸಂಕ್ಷಿಪ್ತ ವಿವರ:–**

ಇತ್ತೀಚಿನ ವರ್ಷಗಳಲ್ಲಿ ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆಯ ಚಟುವಟಿಕೆಗಳು ಬಹುಮುಖ್ಯವಾಗಿ ವಿಸ್ತಾರಗೊಂಡಿದ್ದು ಪ್ರಾಣಿ ಆರೋಗ್ಯ, ರೋಗ ನಿಯಂತ್ರಣ, ಜಾನುವಾರು ಉತ್ಪಾದನೆ ಮತ್ತು ಗ್ರಾಮೀಣ ಅಭಿವೃದ್ಧಿ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾತ್ರವಹಿಸುತ್ತಿದ್ದು, ಕರ್ನಾಟಕ ಸರ್ಕಾರದ ಪ್ರಮುಖ ಇಲಾಖೆಗಳಲ್ಲಿ ಒಂದಾಗಿದೆ.

**೨. ಕರ್ತವ್ಯಗಳ ವಿವರಗಳು:–**

ಈ ಇಲಾಖೆಯು ಸರ್ಕಾರದ ರೂಪಿಸಿರುವ ರೀತಿ ನಿಯಮಗಳ ಕಾರ್ಯವಿಧಾನಗಳ ಮೇಲೆ ಜಿಲ್ಲೆಯ ಅಧೀನ ಕಛೇರಿಗಳಿಂದ ಮತ್ತು ಪ್ರಾದೇಶಿಕ ಅಧಿಕಾರಿಗಳಿಂದ ಬರುವ ಪ್ರಸ್ತಾವನೆಗಳ ಮೇಲೆ ಸಂಬಂಧಿಸಿದ ನಿಯಮಾವಳಿಗಳ ಚೌಕಟ್ಟಿನಲ್ಲಿ ಪರಿಶೀಲಿಸಿ ಸೂಕ್ತ ಕ್ರಮಗಳನ್ನು ತೆಗೆದುಕೊಳ್ಳಲಾಗುತ್ತಿದೆ. ಇಲಾಖೆಯಲ್ಲಿ ಅಧಿಕಾರಿಗಳಿಗೆ ಶಾಖೆವಾರು ವಿಷಯಗಳ ಹಂಚಿಕೆಯ ವಿವರಗಳನ್ನು ನೀಡಲಾಗಿದೆ.

**ಪಶುಪಾಲನೆ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆಗೆ ಸಂಬಂಧಿಸಿದಂತೆ ಕಾರ್ಯ ಹಂಚಿಕೆ ಸಂಕ್ಷಿಪ್ತ ವಿವರ**

| ಪದನಾಮ | ಶಾಖೆ | | ವಿವರ |
|---|---|---|---|
| ಅಪರ ನಿರ್ದೇಶಕರು | ಪ್ರಾದೇಶಿಕ ಶಾಖೆ ಮತ್ತು ಇತ್ಯಾದಿ | 1 | ಪ್ರಾದೇಶಿಕ ಅಧಿಕಾರಿಗಳಿಂದ ಬಂದಿರುವ ಜಿಲ್ಲಾ ವಿಷಯಗಳಿಗೆ ಅಂದರೆ ಜಾನುವಾರುಗಳ ಕುರಿ ಮತ್ತು ಕುಕ್ಕುಟ ಅಭಿವೃದ್ಧಿ ಮತ್ತು ಪ್ರದಾನ ಗ್ರಾಮೀಣ ಯೋಜನೆ ಹಾಗೂ ಹೈನುಗಾರಿಕೆ ವಿಷಯದ ಕುರಿತು ಬಂದಿರುವ ವಿಷಯಗಳನ್ನು ಉಪ ನಿರ್ದೇಶಕರು, ಕುರಿ ಅಭಿವೃದ್ಧಿ ಪ್ರದಾನ ಗ್ರಾಮೀಣ ಯೋಜನೆ, ಉಪ ನಿರ್ದೇಶಕರು (ಕುಕ್ಕುಟ) ಸಹಾಯಕ ನಿರ್ದೇಶಕರು (ಕ್ಷೀರ) ಪಶು ಅಭಿವೃದ್ಧಿ ಇವರುಗಳು ಪರಿಶೀಲಿಸಿ ಮಂಡಿಸಿದ ವಿಷಯಗಳು, ಪ್ರಾದೇಶಿಕಗಳಿಗೆ ಸಂಬಂಧಿಸಿದ ಇನ್ನಿತರ ಜಿಲ್ಲಾ ವಿಷಯಗಳು ಹಾಗೂ ಜಾನುವಾರು ಮತ್ತು ಕುಕ್ಕುಟ ಕ್ಷೇತ್ರಗಳಲ್ಲಿ ಸಾವಿನಿಂದ ಉಂಟಾದ ನಷ್ಟವನ್ನು ಮನ್ನಾ ಮಾಡುವ ಕುರಿತು ಮತ್ತು ಜೊತೆಗೆ ಸಾವು ನ್ಯಾಯದ ಬಗ್ಗೆ ಸಿಬ್ಬಂದಿಗೆ ಸಂಬಂಧಪಟ್ಟ ವಿಷಯಗಳ ಕುರಿತು. |
| ಜಂಟಿ ನಿರ್ದೇಶಕರು (ಆಡಳಿತ) | ಇಲಾಖೆಯ ಆಡಳಿತಾತ್ಮಕ ವಿಷಯಗಳು | 2 | ಆಡಳಿತಾತ್ಮಕ ಮತ್ತು ನ್ಯಾಯಾಲಯದ ಪ್ರಕರಣಗಳು ಔಷಧಿ ಮತ್ತು ರಾಸಾಯನಿಕಗಳ ಖರೀದಿಗೆ ಸಂಬಂಧಿಸಿದ ವಿಷಯಗಳು |
| ಜಂಟಿ ನಿರ್ದೇಶಕರು (ಅಭಿವೃದ್ಧಿ) | ಯೋಜನೆ, ಡಿಪಿಡಿ, ಹಾಗೂ ಅಭಿವೃದ್ಧಿಗೆ ಸಂಬಂಧಿಸಿದಂತೆ | 3 | ಜಿಲ್ಲಾ ಕೇಂದ್ರ ಪುರಸ್ಕೃತ ರಾಜ್ಯ ವಲಯದ ಮತ್ತು ಜಿಲ್ಲಾ ವಲಯದ ಯೋಜನೆಗಳಿಗೆ ಸಂಬಂಧಿಸಿದ ವಿಚಾರಗಳು, ಇಲಾಖೆಯ ವಿಷಯ ಸಮಿತಿ ವಿಷಯಕ್ಕೆ ಸಂಬಂಧಿಸಿದ ವಿಚಾರಗಳು ಇಲಾಖೆಯ ವಾಹನ ಖರೀದಿ, ರಿಪೇರಿ ಇತ್ಯಾದಿ, ದೂರುವಾಣಿಗೆ ಸಂಬಂಧಿಸಿದ ವಿಚಾರಗಳು ಜಿಲ್ಲಾ ಕಾಯ್ದೆ ಅಧಿನಿಯಮ ವಿಚಾರ ಮತ್ತು ತಿದ್ದುಪಡಿ ಇತ್ಯಾದಿ. ಜೊತೆಗೆ ಇಲಾಖೆಯಲ್ಲಿನ ವಿವಿಧ ಅಭಿವೃದ್ಧಿಗೆ ಸಂಬಂಧಿಸಿದ ಕಾರ್ಯಕ್ರಮಗಳ ನಿರೂಪಣೆ, ನಿರ್ವಹಣೆ ಇಲಾಖೆಯಲ್ಲಿ ಪಶುವೈದ್ಯಕೀಯ ಸಂಸ್ಥೆಗಳ ಸ್ಥಾಪನೆ, ಮೇಲ್ದರ್ಜೆಗೇರಿಸುವ ವಿಚಾರಗಳು, ಇಲಾಖೆಯ ಅಧಿಕಾರಿ ಸಿಬ್ಬಂದಿ ವರ್ಗದವರ ತರಬೇತಿ ಕಾರ್ಯಕ್ರಮಗಳ ನಿರ್ವಹಣೆ, ರೈತರಿಗೆ ಇಲಾಖಾ ಚಟುವಟಿಕೆಗಳ ತರಬೇತಿ ನಿರ್ವಹಣೆ, ಕೋಳಿ ಮತ್ತು ಜಾನುವಾರು ಆಹಾರ ಉತ್ಪಾದನೆ ವಿತರಣೆ ಹಾಗೂ ಮಾರಾಟ ನಿಯಮಗಳ ಲೈಸೆನ್ಸ್ (ಅನುಜ್ಞಾ ಪತ್ರ) ನೀಡುವ ಪ್ರಾಧಿಕಾರಿಯಾಗಿ ಕಾರ್ಯನಿರ್ವಹಣೆ ಪ್ರಾಣಿ ಆರೋಗ್ಯ ರೋಗೋದ್ರೇಕ ನಿಯಂತ್ರಣ ಇತ್ಯಾದಿ ಕುರಿತಾದ ಮಾಹಿತಿ ಸಂಗ್ರಹಣೆ ಮತ್ತು ವರದಿ ಮಾಡುವುದರ ಜೊತೆಗೆ ವಿಸ್ತರಣಾ ಕಾರ್ಯಕ್ರಮಗಳ ಅನುಷ್ಠಾನಗೊಳಿಸುವುದು. |

| ಪದನಾಮ | ಶಾಖೆ | | ವಿವರ |
|---|---|---|---|
| ಆರ್ಥಿಕ ಸಹಾಯಕರು | ಇಲಾಖೆಗೆ ಸಂಬಂಧಿಸಿದ ಆರ್ಥಿಕ ವಿಚಾರಗಳು | : | ಇಲಾಖೆಯ ಆಂತರಿಕ ಆರ್ಥಿಕ ವಿಷಯಗಳ ನಿರ್ವಹಣೆ ಆಯವ್ಯಯ, ಅಂದಾಜು : ವಸೂಲಿ ಬಾಕಿಗಳ ನಿರ್ವಹಣೆ, ಅಧೀನ ಕಾರ್ಯಾಲಯಗಳ ಲೆಕ್ಕ ಪತ್ರ ಪರಿಶೋಧನಾ ಕಾರ್ಯನಿರ್ವಹಣೆ ಸಾರ್ವಜನಿಕ ಲೆಕ್ಕ ಪತ್ರ ಪರಿಶೋಧನಾ ಸಮಿತಿ ಹಾಗೂ ಮಹಾಲೇಖಪಾಲರ ಲೆಕ್ಕ ಪರಿಶೋಧನಾ ಸಿಗಳಿಗೆ ಉತ್ತರಿಸುತ್ತದೆ ಜೊತೆಗೆ ಆರ್ಥಿಕ ವಿಷಯಗಳ ಕುರಿತು ಕಡತದಲ್ಲಿ ಅಭಿಪ್ರಾಯ ನೀಡುತ್ತದೆ. |
| ಉಪ ನಿರ್ದೇಶಕರು ಕುಕ್ಕುಟ ಅಭಿವೃದ್ಧಿ (ಕುರಿ ಅಭಿವೃದ್ಧಿ) | ಇಲಾಖೆಗೆ ಸಂಬಂಧಿಸಿದ ಕುಕ್ಕುಟ ಮತ್ತು ಕುರಿ ಅಭಿವೃದ್ಧಿ ಕುರಿತು | : | • ಯೋಜನೆಯ ಭೌತಿಕ : ಆರ್ಥಿಕ ಗುರಿಗಳ ಪೂರ್ತಿ, ಅಧೀನ ಜಿಲ್ಲೆಗಳ ಕಾರ್ಯಕ್ರಮಗಳ ಪರಿಶೀಲನಾ ವರದಿಗಳನ್ನು ನಿಗದಿತ ಸಮಯದಲ್ಲಿ ಕೈಗೊಳ್ಳುವಂತೆ ನಿರ್ವಹಿಸುತ್ತದೆ.<br>• ಕುರಿ/ಕುಕ್ಕುಟ/ಮೊಲ/ಅಭಿವೃದ್ಧಿ ಯೋಜನೆಗಳ ವಿಷಯಕ್ಕೆ ಸಂಬಂಧಿಸಿದಂತೆ ಕಾರ್ಯಕ್ರಮಗಳ ಹಾಗೂ ಸಮಸ್ಯೆಗಳಿಗೆ ಮಾಹಿತಿಯನ್ನು ನೀಡುತ್ತದೆ.<br>• ರೈತ ತರಬೇತಿ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಉಪನ್ಯಾಸಗಳನ್ನು ನೀಡುತ್ತದೆ. |
| ಉಪ ನಿರ್ದೇಶಕರು (ಪ್ರ ಗ್ರಾ ಯೋ) | ಘನೀಕೃತ ವೀರ್ಯ ಕೇಂದ್ರಗಳನ್ನು ಅಭಿವೃದ್ಧಿಗೊಳಿಸುವ ಕುರಿತು | : | ೧. ಜಾನುವಾರು ಕ್ಷೇತ್ರಗಳಿಗೆ ಗುರಿ ನಿಗದಿಪಡಿಸುತ್ತದೆ.<br>೨. ವಾರ್ಷಿಕ ಕಾರ್ಯಕ್ರಮಗಳನ್ನು ರಚಿಸುತ್ತದೆ<br>೩. ಪ್ರಗತಿ ಪೂರೈಕೆ ಕುರಿತು ವಿಶ್ಲೇಷಣೆ<br>೪. ಕಾರ್ಯಕ್ರಮಗಳ ಅನುಷ್ಠಾನಕ್ಕೆ ಆಡಳಿತಾತ್ಮಕ ಸಹಕಾರ<br>೫. ಘನೀಕೃತ ವೀರ್ಯ ಕೇಂದ್ರಗಳ ಕಾರ್ಯಕ್ರಮಗಳಿಗೆ ಪ್ರಗತಿ ಪೂರೈಕೆ ಕ್ರಮಗಳು<br>೬. ಘನೀಕೃತ ವೀರ್ಯ ಕೇಂದ್ರಗಳ ಗುರಿ ನಿಗದಿಪಡಿಸುತ್ತದೆ.<br>೭. ಉತ್ಪಾದನಾ ಗುಣಮಟ್ಟ ನಿಯಂತ್ರಣ ಕ್ರಮಗಳು<br>೮. ಹೋರಿ ಮತ್ತು ಕೋಣಗಳ ಪೂರೈಕೆಗೆ ಕ್ರಮ ತೆಗೆದುಕೊಳ್ಳುತ್ತದೆ.<br>೯. ಘನೀಕೃತ ವೀರ್ಯ ಸರಬರಾಜನ್ನು ನಿಯಂತ್ರಿಸುತ್ತದೆ<br>೧೦. ಕೇಂದ್ರ ಪುರಸ್ಕೃತ ಯೋಜನೆಗಳಿಗೆ ಕಾರ್ಯಕ್ರಮ ರಚಿಸುತ್ತದೆ<br>೧೧. ಜನಕ ಮೌಲ್ಯ ನಿರ್ಣಯ ಕೋಶ ಸಿದ್ಧಪಡಿಸುವ ನಿರ್ದೇಶಿಕೆಯನ್ನು ಪರಿಶೀಲಿಸುತ್ತದೆ ಮತ್ತು ರಚಿಸುತ್ತದೆ<br>೧೨. ಜಾನುವಾರು ಕ್ಷೇತ್ರಗಳಲ್ಲಿ ಜನಿಸುವ ಹೋರಿಕರುಗಳನ್ನು ಘನೀಕೃತ ವೀರ್ಯ ಉತ್ಪಾದನೆಗೆ ಆಯ್ಕೆ ಮಾಡುತ್ತದೆ<br>೧೩. ಮೇವು ಉತ್ಪಾದನೆಗೆ ಅವಶ್ಯ ಮೂಲಭೂತ ಸೌಕರ್ಯಗಳನ್ನು ರಚಿಸುತ್ತದೆ.<br>೧೪. ಕ್ಷೇತ್ರೋತ್ಪನ್ನಗಳ ಬೆಲೆ ನಿಗದಿ<br>೧೫. ಕ್ಷೇತ್ರಗಳು ಹಾಗೂ ಘನೀಕೃತ ವೀರ್ಯ ಕೇಂದ್ರಗಳ ಅಭಿವೃದ್ಧಿ ಕುರಿತು ದಾಖಲಾತಿಗಳನ್ನು ಇಲಾಖೆಯಲ್ಲಿಡುತ್ತದೆ ಇತ್ಯಾದಿ. |
| ಸಹಾಯಕ ನಿರ್ದೇಶಕರು (ವರಾಹ ಅಭಿವೃದ್ಧಿ) | ವರಾಹ ಅಭಿವೃದ್ಧಿ ಹಾಗೂ ಇತರೆ ಕಾರ್ಯಕ್ರಮಗಳು ವಿಚಾರ ಕುರಿತು | : | ಹಂದಿ ತಳಿ ಅಭಿವೃದ್ಧಿ ಕ್ಷೇತ್ರದ ಎಲ್ಲಾ ರೀತಿಯ ಆಡಳಿತಾತ್ಮಕ ಕಾರ್ಯಕ್ರಮವನ್ನು ನಿರ್ವಹಿಸುತ್ತದೆ ಅಂದರೆ ಕ್ಷೇತ್ರದಲ್ಲಿರುವ ಹಂದಿ ಮರಿಗಳ ಉತ್ಪಾದನೆಯ ಬಗ್ಗೆ ಸೂಕ್ತ ಸಲಹೆ ಆಹಾರ ಒದಗಿಸುವ ಬಗ್ಗೆ ಆದೇಶಗಳು, ಮರಿಗಳ ಉತ್ಪಾದನೆಗಾಗಿ ಮಾರ್ಗದರ್ಶನ ನೀಡುವ ಬಗ್ಗೆ<br>ಹಂದಿ ಸಾಕಾಣಿಕೆಯ ಬಗ್ಗೆ ಕ್ಷೇತ್ರಗಳಲ್ಲಿ ರೈತರಿಗೆ ಹಾಗೂ ನಿರುದ್ಯೋಗಿ ವಿದ್ಯಾವಂತರಿಗೆ, ತರಬೇತಿ ಕೊಡುವ ಬಗ್ಗೆ ಸೂಚನೆ ಮತ್ತು ಕಾರ್ಯನಿರ್ವಹಣೆ ಮಾಡಲಾಗುತ್ತದೆ. ಬಾಗಲಕೋಟೆ ಜಿಲ್ಲೆ |

| ಪದನಾಮ | ಶಾಖೆ | | ವಿವರ |
|---|---|---|---|
| | | | ಮುಧೋಳ ತಾಲ್ಲೂಕಿನಲ್ಲಿ ಒಂದು ಮುಧೋಳ ಬೇಟೆ ನಾಯಿ ತಳಿ ಸಂವರ್ಧನಾ ಕೇಂದ್ರವನ್ನು ಪ್ರಾರಂಭಿಸುವ ಕಾರ್ಯವನ್ನು ನಿರ್ವಹಿಸುವ ಕುರಿತು ಕಾರ್ಯನಿರ್ವಹಿಸಲಾಗಿದೆ. ಕ್ಷೇತ್ರದ ಅಧಿಕಾರಿಗಳಿಗೆ ಸೂಕ್ತ ಸಲಹೆಗಳನ್ನು ಕೊಡುತ್ತದೆ, ಹಂದಿ ಸಾಕಾಣಿಕೆ ಬಗ್ಗೆ ದೂರದರ್ಶನ ರೇಡಿಯೋ ಮೂಲಕ ಪ್ರಾತ್ಯಕ್ಷಿಕಾ ಕಾರ್ಯಕ್ರಮವನ್ನು ನಿರ್ವಹಿಸಲಾಗುತ್ತದೆ; ಪುಸ್ತಕದ ಬೆಲೆ ಮನ್ನಾ ಮಾಡುತ್ತದೆ, ಕಚೇರಿಯ ಸಲಕರಣೆಗಳನ್ನು ಖರೀದಿಸಿ ಒದಗಿಸುತ್ತದೆ ಇತ್ಯಾದಿ.<br>ಕರ್ನಾಟಕ ರಾಜ್ಯ ಮಹಿಳಾ ಆಯೋಗದ ಸಮಿತಿಯ ಅಧ್ಯಕ್ಷರಾಗಿ ಇಲಾಖೆಯ ಮಹಿಳೆಯರು ದೌರ್ಜನ್ಯಕ್ಕೆ ಒಳಗಾಗುವ ಸಂದರ್ಭದಲ್ಲಿ ತೊಂದರೆಗಳನ್ನು ನಿವಾರಿಸುವ ವಿಚಾರಣೆ ಮಾಡುವ ಹೊಣೆಯನ್ನು ಸದಸ್ಯ ಕಾರ್ಯದರ್ಶಿಗಳಿಗೆ ಸಲ್ಲಿಸುವ ಕಾರ್ಯನಿರ್ವಹಿಸಲಾಗುತ್ತಿದೆ.<br>ಹಾಲಿ ಇರುವ ಜವಾಬ್ದಾರಿಯನ್ನು ಹೊರತುಪಡಿಸಿ, ನಿರ್ದೇಶಕರು, ಅಪರ ನಿರ್ದೇಶಕರು, ಜಂಟಿ ನಿರ್ದೇಶಕರು ಮತ್ತು ಉಪನಿರ್ದೇಶಕರು ಕೊಡುವ ಇತರ ಕೆಲಸ ಕಾರ್ಯಗಳನ್ನು ಮಾಡಲಾಗುತ್ತದೆ.<br>ಅಪರ ನಿರ್ದೇಶಕರ ಮೌಖಿಕ ಆದೇಶದ ಮೇರೆಗೆ ೧೯೯೯ ರಿಂದ 2003 ರ ವರೆಗೆ ಜಿಲ್ಲಾ ಪಂಚಾಯತಿವತಿಯಿಂದ ಇಲಾಖೆಯ ಜಿಲ್ಲಾ ಉಪ ನಿರ್ದೇಶಕರು ಖರೀದಿಸಿರುವ ಔಷಧಿ ಸಲಕರಣೆಗಳ ಬಗ್ಗೆ [illegible] ಕ್ರೋಢೀಕರಿಸುವ ಕೆಲಸ ಕಾರ್ಯಗಳನ್ನು ನಿರ್ವಹಿಸಲಾಗುತ್ತಿದೆ. |
| ಉಪ ನಿರ್ದೇಶಕರು (ಸರೈಅಯೋ) | ಕೇಂದ್ರ ಪುರಸ್ಕೃತ ಯೋಜನೆ ಹಾಗೂ ಇನ್ನಿತರೆ ಯೋಜನಾ ಕಾರ್ಯಕ್ರಮ ಕುರಿತು. | : | ೧. ಕೇಂದ್ರ ಪುರಸ್ಕೃತ ಯೋಜನೆಗಳು ಸೇರಿದಂತೆ ವಿವಿಧ ಯೋಜನೆಗಳ ನಿರೂಪಣೆ ಮತ್ತು ನಿರ್ವಹಣೆಯಲ್ಲಿ<br>೨. ಪ್ರತಿ ಯೋಜನೆಗಳಲ್ಲೂ ಭೌತಿಕ ಹಾಗೂ ಆರ್ಥಿಕ ಗುರಿ ನಿಗದಿಪಡಿಸುವ ವಿಷಯದಲ್ಲಿ<br>೩. ಯೋಜನೆಗಳು, ಗುರಿ ಮತ್ತು ಸಾಧನೆಗಳ ಮಾಸಿಕ ಪ್ರಗತಿಯ ಪುನರ್ ಅವಲೋಕನ ಮಾಡುವಲ್ಲಿ<br>೪. ಯೋಜನೆಗಳ ಯಶಸ್ಸಿಗೆ ಸಂಬಂಧಪಟ್ಟ ನಿರ್ವಹಣಾಧಿಕಾರಿಗಳಿಗೆ ಮಾರ್ಗದರ್ಶನ ನೀಡುವಲ್ಲಿ.<br>೫. ಯೋಜನಾ ವೆಚ್ಚವನ್ನು ಆದ್ಯತೆ ಮೇರೆಗೆ ವಿವಿಧ ಯೋಜನೆಗಳಿಗೆ ಪುನರ್ ವಿನಿಯೋಗ ಮಾಡುವಲ್ಲಿ<br>೬. ಯೋಜನೆಗಳ ವಿಷಯದಲ್ಲಿ ಪ್ರಗತಿ ವರದಿಗಳ ತಯಾರಿಕೆ ಮತ್ತಿತರ ವ್ಯವಹಾರಗಳನ್ನು ಸರ್ಕಾರದೊಂದಿಗೆ ನಡೆಸುವಲ್ಲಿ<br>೭. ಸಾಮಾಜಿಕ ಹಾಗೂ ಆರ್ಥಿಕ ಕಾರ್ಯಕ್ರಮಗಳ ನಿರೂಪಣೆ ಹಾಗೂ ಯಶಸ್ವಿ ಕಾರ್ಯಾಚರಣೆಗೆ ಮಾರ್ಗದರ್ಶನ ನೀಡುತ್ತದೆ |
| ಸಹಾಯಕ ನಿರ್ದೇಶಕರು (ಸರೈಅಯೋ) | ಸದರಿ | : | ಸಹಾಯಕ ನಿರ್ದೇಶಕರು (ಸಣ್ಣ ರೈತರ ಅಭಿವೃದ್ಧಿ ಯೋಜನೆ) ರವರು ಉಪ ನಿರ್ದೇಶಕರು (ಸಣ್ಣ ರೈತರ ಅಭಿವೃದ್ಧಿ) ಯೋಜನೆ ರವರಿಗೆ ಸಹಾಯಕರಾಗಿ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಾರೆ) |
| ಸಹಾಯಕ ನಿರ್ದೇಶಕರು ಮತ್ತು ಪಶುವೈದ್ಯಾಧಿಕಾರಿಗಳು | ಕುಕ್ಕುಟ ಮತ್ತು ಪಶು ಆಹಾರಗಳ ಗುಣ ನಿಯಂತ್ರಣ ಶಾಖೆ | : | ೧. ಕುಕ್ಕುಟ ಮತ್ತು ಪಶು ಆಹಾರಗಳ ಉತ್ಪಾದಕರಿಗೆ ಮತ್ತು ವಿತರಣೆಗಾರರಿಗೆ ಪರವಾನಗಿಯನ್ನು ನೀಡುತ್ತದೆ<br>೨. ಉತ್ಪಾದಕರು ಪರವಾನಗಿ ಪ್ರಾಧಿಕಾರ ನಿಗದಿಪಡಿಸುವ ಆಹಾರಗಳನ್ನೇ, ನಿಗದಿಪಡಿಸಿದ ಪೌಷ್ಠಿಕಾಂಶಗಳ ಪ್ರಮಾಣದಲ್ಲಿ ಉತ್ಪಾದಿಸಿ ಮಾರಾಟ ಮಾಡಬೇಕಾಗಿರುತ್ತದೆ. |

| ಪದನಾಮ | ಶಾಖೆ | | ವಿವರ |
|---|---|---|---|
| ಸಹಾಯಕ ನಿರ್ದೇಶಕರು ಮತ್ತು ಪಶು ವೈದ್ಯಾಧಿಕಾರಿಗಳು | ಕುಕ್ಕುಟ ಮತ್ತು ಪಶು ಆಹಾರಗಳ ಗುಣನಿಯಂತ್ರಣ ಶಾಖೆ | | ೩. ಶಾಖೆಯ ತಾಂತ್ರಿಕ ಅಧಿಕಾರಿಗಳು, ಆಹಾರ ಉತ್ಪಾದಕ ಘಟಕಗಳಿಗೆ ಅನಿರೀಕ್ಷಿತ ಭೇಟಿ ನೀಡಿ ಗುಣ ನಿಯಂತ್ರಣಕ್ಕೆ ಸಂಬಂಧಿಸಿದ ತಾಂತ್ರಿಕ ಅಂಶಗಳನ್ನು ಪರಿಶೀಲಿಸಿ, ಲಭ್ಯವಿರುವ ಆಹಾರ ಮಾದರಿಗಳನ್ನು ಸಂಗ್ರಹಿಸುತ್ತದೆ.<br>೪. ಸಂಗ್ರಹಿಸಿದ ಆಹಾರ ಮಾದರಿಗಳನ್ನು ವಿಶ್ಲೇಷಣೆಗೆ ಒಳಪಡಿಸುತ್ತದೆ.<br>೫. ನಿರ್ದೇಶಕರಿಂದ ರಚಿಸಲ್ಪಟ್ಟ ಆಹಾರ ತಜ್ಞ ಸಮಿತಿಯು ಗುಣ ನಿಯಂತ್ರಣಕ್ಕೆ ಸಂಬಂಧಿಸಿದಂತೆ ಹಾಗೂ ಆಹಾರಗಳಲ್ಲಿನ ಪೌಷ್ಠಿಕಾಂಶಗಳ ಪ್ರಮಾಣ ನಿಗದಿಪಡಿಸುವ ವಿಚಾರವಾಗಿ ಪರವಾನಗಿ ಪ್ರಾಧಿಕಾರಿಯವರಿಗೆ ಮಾರ್ಗದರ್ಶನ ನೀಡುತ್ತಿದೆ.<br>೬. ಇಲಾಖಾ ಫಾರಂಗಳಿಗೆ ಬೇಕಾದ ಆಹಾರಗಳನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳು 2000 ರ ಪ್ರಕಾರ ಟೆಂಡರ್‌ಗಳನ್ನು ಆಹ್ವಾನಿಸಿ ದರ ನಿಗದಿಪಡಿಸುವ ಎಲ್ಲಾ ಕೆಲಸಗಳು. |
| ಸಹಾಯಕ ನಿರ್ದೇಶಕರು (ಪ್ರಚಾರ) | ಇಲಾಖೆಗೆ ಸಂಬಂಧಿಸಿದ ಯೋಜನಾ ವರದಿಯನ್ನು ಸಿದ್ಧಪಡಿಸುತ್ತದೆ ಮತ್ತು ಇತ್ಯಾದಿ ಕಾರ್ಯಕ್ರಮಗಳ ಬಗ್ಗೆ | : | 1. ಮಾಂಸ ಕೋಳಿ ಮತ್ತು ಮೊಟ್ಟೆ ಕೋಳಿಗಳ ಕುರಿತಂತೆ ಯೋಜನಾ ವರದಿಯನ್ನು ತಯಾರಿಸಿ ಆಸಕ್ತಿಯುಳ್ಳ ರೈತ ಸಮುದಾಯಕ್ಕೆ ನೀಡುತ್ತದೆ.<br>2. ಪಶುಪಾಲನೆಯ ಆಧುನಿಕ ತಂತ್ರಜ್ಞಾನಗಳ ಬಗ್ಗೆ ರೈತರಿಗೆ ತರಬೇತಿ ಶಿಬಿರಗಳ ನಿರೂಪಣೆ ಮತ್ತು ನಿರ್ವಹಣೆ<br>3. ನದೀಕಣಿವೆ ಯೋಜನೆಯಡಿಯಲ್ಲಿ ಉಚಿತ ಪಶು ಚಿಕಿತ್ಸಾ ಶಿಬಿರಗಳನ್ನು ನಡೆಸುವ ಬಗ್ಗೆ ಪ್ರಚಾರ ನೀಡುತ್ತದೆ.<br>4. ಜಾನುವಾರು ಜಾತ್ರೆಗಳಲ್ಲಿ ಹಾಗೂ ವಿವಿಧ ವಸ್ತು ಪ್ರದರ್ಶನಗಳಲ್ಲಿ ಇಲಾಖೆಯನ್ನು ಪ್ರತಿನಿಧಿಸಿ, ಇಲಾಖಾ ಕಾರ್ಯಕ್ರಮಗಳನ್ನು ಕುರಿತು ಪ್ರಚಾರ ನೀಡುತ್ತದೆ.<br>5. ವಿಸ್ತರಣೆ ಮತ್ತು ಪ್ರಚಾರ ಮಾಧ್ಯಮಗಳ ಮೂಲಕ ಜಾನುವಾರು ಅಭಿವೃದ್ಧಿ ಹಾಗೂ ಪಶುಸಂಗೋಪನೆ ಕುರಿತಂತೆ ಪ್ರಚಾರ ನೀಡುತ್ತದೆ.<br>6. ಪಶುಸಂಗೋಪನಾ ಇಲಾಖೆಯಲ್ಲಿ ಸಾರ್ವಜನಿಕರಿಗೆ ದೊರೆಯುವ ನೆರವು ಮತ್ತು ಸೌಲಭ್ಯಗಳ ಬಗ್ಗೆ ಪ್ರಕಟಣೆಯನ್ನು ನೀಡುತ್ತದೆ.<br>7. ಪಶ್ಚಿಮ ಘಟ್ಟ ಅಭಿವೃದ್ಧಿ ಯೋಜನೆಯಡಿಯಲ್ಲಿ ಕೈಗೊಳ್ಳುವ ಕಾರ್ಯಕ್ರಮಗಳಿಗೆ ತಾಂತ್ರಿಕ ಅನುಮೋದನೆ ನೀಡಲು ನೆರವಾಗುತ್ತದೆ.<br>8. ಹೈನುಗಾರಿಕೆ ಮತ್ತು ಮೇವು ಅಭಿವೃದ್ಧಿ ಉತ್ಪಾದನೆ ಬಗ್ಗೆ ರೈತರಿಗೆ ತರಬೇತಿ ಕಾರ್ಯಕ್ರಮದ ಬಗ್ಗೆ ದೂರದರ್ಶನದಲ್ಲಿ ಪ್ರಕಟಣೆ ಕೊಡುತ್ತದೆ.<br>9. ರಾಜ್ಯ ಮಟ್ಟದ ಸಮೂಹ ಮಾಧ್ಯಮಗಳ ಸಮನ್ವಯ ಸಮಿತಿಗಳಲ್ಲಿ ಭಾಗವಹಿಸುತ್ತದೆ ಹಾಗೂ ಅವರು ಕೋರಿದ ಮಾಹಿತಿಯನ್ನು ನೀಡುತ್ತದೆ.<br>10. ರೈತ ಸಂಪರ್ಕ ಕೇಂದ್ರಗಳಲ್ಲಿ ಪಶುಸಂಗೋಪನಾ ಇಲಾಖೆಯ ವಿಸ್ತರಣೆ ಕಾರ್ಯಕ್ರಮಗಳ ಬಗ್ಗೆ ಮಾಹಿತಿ ನೀಡುತ್ತದೆ.<br>11. ಇಲಾಖೆಯ ಕಾರ್ಯಕ್ರಮಗಳ ಕುರಿತು ಪ್ರಚಾರ ಫಲಕಗಳನ್ನು ಹಾಗೂ ವಿಸ್ತರಣಾ ಸಾಮಗ್ರಿಗಳನ್ನು ತಯಾರಿಸಲು ನೆರವು ನೀಡುತ್ತದೆ. |

| ಪದನಾಮ | ಶಾಖೆ | | ವಿವರ |
|---|---|---|---|
| ಸಹಾಯಕ ನಿರ್ದೇಶಕರು (ಹ್ಯಾಚರಿ) | ಇಲಾಖೆಗೆ ಸಂಬಂಧಿಸಿದ ಯೋಜನಾ ವರದಿಯನ್ನು ಸಿದ್ಧಪಡಿಸುತ್ತದೆ ಮತ್ತು ಇತ್ಯಾದಿ ಕಾರ್ಯಕ್ರಮಗಳ ಬಗ್ಗೆ | | 12. ಇಲಾಖೆಯಲ್ಲಿ ಕೆಲಸ ಮಾಡುತ್ತಿರುವ ಅಧಿಕಾರಿಗಳನ್ನು ವಿವಿಧ ತರಬೇತಿ ಕಾರ್ಯಕ್ರಮಗಳಿಗೆ ನಿಯೋಜಿಸಲು ನೆರವಾಗುತ್ತದೆ. |
| ಸಹಾಯಕ ನಿರ್ದೇಶಕರು ಮೇವು ಅಭಿವೃದ್ಧಿ ಅಧಿಕಾರಿ | ಮೇವು ಅಭಿವೃದ್ಧಿ ಮತ್ತು ಇತರೆ ಬರಗಾಲ ಪರಿಸ್ಥಿತಿ ಬಗ್ಗೆ | : | ೧. ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಮತ್ತು ಜಾನುವಾರು ಕ್ಷೇತ್ರಗಳಲ್ಲಿ ಮೇವು ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ಮಾಹಿತಿ ನೀಡಿ, ಕಾರ್ಯಕ್ರಮಗಳ ನಿರೂಪಣೆ ನಿರ್ವಹಣೆ ಮತ್ತು ಮೇಲ್ವಿಚಾರಣೆ,<br>೨. ರಾಜ್ಯದ ವಿವಿಧ ಜಿಲ್ಲೆಗಳಿಗೆ ಶಿಫಾರಸ್ಸು ಮಾಡುವ ಮೇವು ತಳಿಗಳ ಬೆಳವಣಿಗೆಯನ್ನು ಜಾರಿಗೆ ತರುವ ಬಗ್ಗೆ ತಾಂತ್ರಿಕ ಮಾಹಿತಿ ಒದಗಿಸುತ್ತದೆ.<br>೩. ಆಸಕ್ತಿ ರೈತರಿಗೆ ಮತ್ತು ಇಲಾಖೆ ಅಧಿಕಾರಿಗಳು ಮತ್ತು ಸಿಬ್ಬಂದಿಗೆ ಮೇವು ಬೆಳೆಗಳ ಅಭಿವೃದ್ಧಿ ಮತ್ತು ಉತ್ಪಾದನೆ ಬಗ್ಗೆ ಮಾಹಿತಿ ಪೂರೈಕೆ<br>೪. ಬರಗಾಲ ಪರಿಸ್ಥಿತಿಯಲ್ಲಿ ಮೇವು ಸಂಗ್ರಹಣೆ ಮತ್ತು ವಿತರಣೆ ಬಗ್ಗೆ ಅಪರ ನಿರ್ದೇಶಕರಿಗೆ ಸಹಾಯಕರಾಗಿ ಕಾರ್ಯ ನಿರ್ವಹಣೆ<br>೫. ಮೇವು ಅಭಿವೃದ್ಧಿ ಬಗ್ಗೆ ತಜ್ಞ ವಿಜ್ಞಾನಿಗಳಿಂದ ತಾಂತ್ರಿಕ ಮಾಹಿತಿಯನ್ನು ಸಂಗ್ರಹಿಸಿ ಕ್ಷೇತ್ರಗಳಲ್ಲಿ ಕಾರ್ಯಗತಗೊಳಿಸುವ ಬಗ್ಗೆ ಸಮನ್ವಯ ಅಧಿಕಾರಿಯಾಗಿ ಕಾರ್ಯನಿರ್ವಹಣೆ |
| ಸಹಾಯಕ ನಿರ್ದೇಶಕರು (ಕ್ಷೀರ) | ರೈತರಿಗೆ ಹೈನುಗಾರಿಕೆ ಮತ್ತು ಇತರೆ ವಿಷಯದ ಕುರಿತು | : | ೧. ಎಂ ಎಂ ಪಿ ಒ ೯೨ ಕಾಯಿದೆ ಅಡಿಯಲ್ಲಿ ೧೦೦೦೦ ಲೀಟರ್ ನಿಂದ ೨.೦೦ ಲಕ್ಷ ಲೀಟರ್ ಸಾಮರ್ಥ್ಯ ಇರುವ ಡೈರಿ ಘಟಕಗಳಿಗೆ ಭೇಟಿ ನೀಡಿ ಪರವಾನಗಿಯನ್ನು ನೀಡುತ್ತದೆ.<br>೨. ಎಂ ಎಂ ಪಿ ಒ ೯೨ ಕಾಯಿದೆ ಅಡಿಯಲ್ಲಿ ನೀಡಿದ ಪರವಾನಗಿಯನ್ನು ಪ್ರತಿ ೫ ವರ್ಷಕ್ಕೊಮ್ಮೆ ನವೀಕರಿಸುವ ಮುಂಚಿತವಾಗಿ ಡೈರಿಗಳಿಗೆ ಭೇಟಿ ನೀಡಿ ವರದಿ ಸಲ್ಲಿಸುತ್ತದೆ.<br>೩. ರೈತರಿಗೆ ಹಸುಗಳನ್ನು ಸಾಕುವ ಬಗ್ಗೆ ಯೋಜನಾ ವರದಿಯನ್ನು ನೀಡುತ್ತದೆ<br>೪. ಕೆ ಎಂ ಎಫ್ ಹಾಗೂ ಐ ಎ ಹೆಚ್ ಅಂಡ್ ವಿ ಬಿ ಸಂಸ್ಥೆಗಳಿಗೆ ಸಂಬಂಧಿಸಿದ ಯೋಜನಾ ಮತ್ತು ಯೋಜನೇತರ ಅಡಿಯಲ್ಲಿ ಒದಗಿಸಿರುವ ವೇತನವನ್ನು ಬಿಡುಗಡೆ ಮಾಡುವಲ್ಲಿ ಅನುವು ಮಾಡಿಕೊಡುತ್ತದೆ. |

**ಅಧಿಕಾರಿಗಳು / ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು**

ಇಲಾಖೆಯ ಕಾರ್ಯಚಟುವಟಿಕೆಗಳ ನಿರ್ವಹಣೆಯನ್ನು ಹಲವು ಶಾಖೆಗಳಲ್ಲಿ ವಿಂಗಡಿಸಲಾಗಿದ್ದು, ಪ್ರತಿಯೊಂದು ನಿರ್ದಿಷ್ಟ ವಿಷಯಕ್ಕೆ ಒಬ್ಬೊಬ್ಬ ವಿಷಯ ನಿರ್ವಾಹಕರು, ಮೇಲ್ವಿಚಾರಣೆಗೆ ಅಧೀಕ್ಷಕರಿದ್ದು, ಸಂಪೂರ್ಣ ಪರಿಶೀಲನೆಗೆ ಅಧೀನ ಅಧಿಕಾರಿಗಳು ಹಾಗೂ ಜಂಟಿ ನಿರ್ದೇಶಕರ ವೃಂದದ ಒಬ್ಬೊಬ್ಬ ಅಧಿಕಾರಿಗಳಿರುತ್ತಾರೆ. ಹೀಗಾಗಿ ಇಲಾಖೆಯ ಕಾರ್ಯಚಟುವಟಿಕೆಯು ಸುಗಮವಾಗಿ ನಡೆಯುತ್ತಿದೆ.

**ಮಾಹಿತಿಯನ್ನು ಪಡೆಯಲು ನಾಗರೀಕರಿಗೆ ನೀಡಲಾಗುವ ಅನುಕೂಲತೆಯ ವಿವರ:**

ಇಲಾಖೆಯಿಂದ ಹೊರಡಿಸಲಾಗುವ ಪ್ರಮುಖ ಆದೇಶಗಳ ಹಾಗೂ ಪ್ರಕಟಣೆಗಳ ಪ್ರತಿಗಳನ್ನು ನಿರ್ದೇಶನಾಲಯದ ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗುತ್ತಿದೆ.

ನಿರ್ದೇಶಕರು
ಪಶುಪಾಲನೆ ಮತ್ತು ಪಶುವೈದ್ಯ ಸೇವಾ ಇಲಾಖೆ,
ಬೆಂಗಳೂರು


ನಿರ್ದೇಶಕರು
ಅಪರ ನಿರ್ದೇಶಕರು
ಜಂಟಿ ನಿರ್ದೇಶಕರು (ಅಭಿವೃದ್ಧಿ)
ಜಂಟಿ ನಿರ್ದೇಶಕರು (ಆಡಳಿತ)
ಆರ್ಥಿಕ ಸಹಾಯಕರು
ಉನಿ (ಕುಕ್ಕುಟ)
ಉನಿ ಪ್ರಗ್ರಯೋ
ಉನಿ ಕುರಿ(ಅ)
ಸನಿ (ಪರಾಹ )
ಸನಿ (ಕ್ಷೀರ )
ಸನಿ (ಪೀಅ)
ಉನಿ (ಎಸ್ ಎಫ್ ಡಿಎ)
ಸನಿ (ಎಸ್ ಎಫ್ ಡಿಎ)
ಸನಿ (ಹ್ಯಾಚರಿ)
ಸನಿ (ಕ್ಯೂ ಸಿಪಿಎಫ್ )
ಕೇಂದ್ರ ಕಛೇರಿ ಸಹಾಯಕರು
ಆಡಳಿತ ಸಹಾಯಕರು

PR-1229

**IN THE COURT OF THE ADDITIONAL REGISTRAR OF CO-OPERATIVE SOCIETIES, (INDUSTRIES AND MISCELLANEOUS), OFFICE OF THE REGISTRAR OF CO-OPERATIVE SOCIETIES, No.1, ALI ASKAR ROAD, BANGALORE-52**

**DISPUTE No. A(I/M) DIS/D7/8763/2002-03**

| **Petitioner** | **Opposite** | **Respondents** |
|---|---|---|
| Secretary,<br>Karnataka Rajya Kaigarika<br>Sahakara Bank Niyamita, No. 11,<br>Bull Temple Road, Basavanagudi,<br>Bangalore-560 004. | | 1) Smt. Munilakshmamma W/o. Ramanujam<br>2) Sri Ramanujam S/o. K.B. Hanumadas, No. 907, Sharada Nilaya, Keelukote, Kolar |

**Notice of attachment of immovable properties under section 103 of the Karnataka Cooperative Societies Act, 1959**

1. Whereas, the Petitioner Bank has filed the above dispute before me under section 70 of the Karnataka Co-operative Societies Act, 1959 for recovery of a sum of Rs. 3,89,390/- along with future interest at 19.5% on the principal amount of Rs. 3,62,520/- from 1.2.2003 till the date of realisation from the Respondents. The dispute is taken on file under Dispute No. A/I&M/D7/8763/2002-2003.

2. Whereas it is brought to my notice by the Petitioner Bank by an application filed under Section 103 of the Karnataka Co-operative Socieites Act, 1959 that the Respondents are contemplating to convey or alienate or dispose the immovable properties belonging to the Ist Respondents mentioned in the Schedule hereunder, with the intent to delay the enforcement or execution of any award or order that may be passed in the above dispute against them.

3. Whereas the petitioner Bank has further stated that if the Respondents are not prevented from doing so, the petitioner society will be left with no means to recover the amount even if any award/decree is obtained against the Respondents.

4. Whereas, I am fully convinced that the disposal of Schedule Property of the Ist Respondents would defeat or delay the enforcement or execution of any order/decree that may be passed against the Respondents.

5. Hence, I pass the following order.

**ORDER**

Under the circumstances explained above and in exercise of powers vested in me under Section 103 of the Karnataka Co-operatives Act, 1959 as conferred by the Government Notification No. CMW/169/CLM/2001 dated: 21.11.2001, I, B. Nagaraja, Additional Registrar of Cooperative Societies (Industrial & Miscellaneous) Bangalore do hereby order the conditional attachment of the movable/ immovable properties of the Respondents as mentioned in the Schedule hereunder before Judgement in the above case.

Notice is hereby given to the Respondents that if they desire to have the conditional attachment raised, they should furnish cash security to the extent of Rs. 4.30 lakhs by depositing the said amount in the petitioner Cooperative Bank in the name of the Additional Registrar of Cooperative Societies (I & M) Bangalore under Suspense Account and produce the original receipt/challan issued thereon to this office on or before 29.11.2003 at 3.00 P.M. without fail.

If they fail to furnish the case security as ordered above within the stipulated period, this conditional attachment will be confirmed as made absolute.

Notice is also hereby given to persons purchasing or acquiring the properties mentioned in the Schedule hereunder that they will do so subject to this attachment.

**SCHEDULE - A - PROPERTY OF RESPONDENTS**

All that piece and parcel of property bearing Khatha No. 578, CMC assessment No. 221, House No. 10, measuring 25 x 32 feet, situated at Kelukote, Kolar Town, Kolar.

**Bounded on**

| | |
|---|---|
| East by | Site No. 17 |
| West by | Road |
| North by | Property of Sri Nagaraj |
| South by | Site No. 11 |

**SCHEDULE - B - PROPERTY OF RESPONDENT**

All that piece and parcel of property bearing Khatha No. 579 CMC assessment No. 222 House No. 12, measuring 25 x 32 feet. Situated at Kelukote, Kolar Town, Kolar.

**Bounded on**

| | |
|---|---|
| East by | Site No. 17 |
| West by | Road |
| North by | Site No. 10 |
| South by | Site No. 12 |

Given under my hand and seal this the 10th day of November 2003.

Additional Registrar of C.S.,
(Industrial & Miscellaneous) Bangalore.

PR-1268

**OFFICE OF THE EXECUTIVE ENGINEER, KBJNL IBC DIVISION, YANKANCHI**

**NOTIFICATION**

**(See Section-2(A) of the Act)**

**See Notification No. ID-16-NPC-2000(P), Dated: March 2001**

In exercise of the powers conferred by (1) clause (3) Section (2) of the Karnataka Irrigation Act, 1965 and (2) Notification No. ID:16:NPC:2001 dated 8.3.2001 and irrigation officer hereby notifies the areas of operation as specified in clause (3) and (A) of the table below for the Water Users Society as (W.U.S).

| Sl.No. | Name of the Distributory sub-distributory, Minor lateral, direct pipe culvert | Area to be irrigated in the area of operated | |
|---|---|---|---|
| | | Name of the village | Extent of irrigated Area |
| 1 | Devanagaon-IV Tq; Sindgi. W.U.C.S. Dy-13 Lat 16, 17 OL-4, 5 | Devangaon | 328.87 |
| 2 | Bommanahalli-III Tq: Sindgi W.U.C.S. Dy-13, L-9A SL 1, 2/9A D.P.O. 1,2,3,6 | Bommanahalli-II | 431.16 |
| 3 | Malli-6 Tq: Jewargi W.U.C.S. Dy. 5A, R-4, R-5 OL-2, OR mm6 | Malli-6 | 540.79 |
| 4 | Kakkalameli-I Tq: Sindgi W.U.C.S. Dy-11 | Kakkalameli | 559.33 |
| 5 | Devanagoun-I Tq: Sindgi W.U.C.S. Dy-13, Lat-9A | Devanagoun | 407.84 |

**Sri B.N. Kanakadas**
Executive Engineer,
KBJNL IBC Division, Yankanchi.

**OFFICE OF THE EXECUTIVE ENGINEER, KBJNL IBC DIVISION, YANKANCHI**

**NOTIFICATION**

**(See Section-2(A) of the Act)**

**See Notification No. ID-16-NPC-2000(P), Dated: March 2001**

In exercise of the powers conferred by (i) clause (3) Section (2) of the Karnataka Irrigation Act, 1965 and (2) Notification No. ID:16:6:NPC:2001 dated 8.3.2001 and irrigation officer hereby notifies the areas of operation as specified in clause (3) and (A) of the table below for the Water Users Society as (W.U.S).

| Sl.No. | Name of the Distributory sub-distributory, Minor lateral, direct pipe outlets | Area to be irrigated in the area of operated | |
|---|---|---|---|
| | | Name of the village | Extent of irrigated Area |
| 1 | SOMAJAL-I W.U.C.S. IBC D-13 Lat No. 2 DPO 1 to 11 | SOMAJAL | 423.53 Ha |
| 2 | SOMAJAL-II W.U.C.S. IBC Lat No. 3 DPO 1 to 13 | SOMAJAL-II | 418.39 Ha |
| 3 | BAGALUR-II W.U.C.S. D-11 L-19, SR-3 | BAGALUR-II | 593.19 Ha |
| 4 | MALLI-I W.U.C.S. IBC D-2 R-2 | MALLI | 558.16 Ha |
| 5 | MALLI-IV W.U.C.S. IBC D-2 BL-3 | MALLI | 456.77 Ha |

**Sri B.N. Kanakadas**
Executive Engineer,
KBJNL IBC Division, Yankanchi.

PD-120

**THE COMPANIES (COURT) RULES, 1959**
**FORM NO.155**
**(See Rule 329)**
**Members' voluntary winding up**
**Name of the Company: ANGLIAN WATER INTERNATIONAL PRIVATE LIMITED**
**NOTICE CONVENING (FINAL) MEETING**

NOTICE is hereby given in pursuance of section 497/509 of the Companies Act, 1956, that a General Meeting of the members of the above named Company will be held at its Regd. office 105 1st 'A' Main, 2nd Cross, S.T. Bed Layout, Koramangala, Bangalore-560 034 on Wednesday, the 31st December 2003 at 10.30 A.M. for the purpose of having an account laid before them showing the manner in which the winding up has been conducted and the property of the company disposed off and of hearing any explanation that may be given by the Liquidator and also of determining by a Special Resolution of the Company, the manner in which the books, accounts and documents of the Company and of the Liquidator shall be disposed off.

By Order of Board

Place: Bangalore **S.K. KANTHARAJ**
Dated 29th November 2003. Liquidator

**ಕಂಪನಿಗಳ (ನ್ಯಾಯಾಲಯ) ನಿಯಮ, 1959**
**ನಮೂನೆ ಸಂಖ್ಯೆ: 155**
**(ನಿಯಮ 329 ನೋಡಿ)**
**ಸದಸ್ಯರುಗಳ ಸ್ವ-ಇಚ್ಛೆಯಿಂದ ಸ್ಥಗಿತ**
**ಕಂಪನಿ ಹೆಸರು: ಆಂಗ್ಲಿಯನ್ ವಾಟರ್ ಇಂಟರ್‌ನೇಶನಲ್ (ಪ್ರೈ) ಲಿಮಿಟೆಡ್**
**ಸಭೆ (ಅಂತಿಮ) ನಡೆಸುವ ಕುರಿತು ನೋಟಿಸ್**

ಕಂಪನಿಗಳ ಕಾಯ್ದೆ 1956ರ 497/509ನೇ ವಿಧಿಯಂತೆ ಮೇಲೆ ಹೆಸರಿಸಿದ ಕಂಪನಿಯ ಸದಸ್ಯರುಗಳ ಸಾಮಾನ್ಯ ಸಭೆ ಕಂಪನಿಯ ನೋಂದಾಯಿತ ರಿ ಕಛೇರಿ ನಂ.105, 1ನೇ ಎ ಮುಖ್ಯರಸ್ತೆ, 2ನೇ ತಿರುವು, ಎಸ್.ಟಿ. ಬೆಡ್ ಲೇಔಟ್, ಕೋರಮಂಗಲ, ಬೆಂಗಳೂರು-56003 ಇಲ್ಲಿ 31 ಡಿಸೆಂಬರ್ 2003, ಬುಧವಾರ ಬೆಳಿಗ್ಗೆ 10-30 ಗಂಟೆಗೆ, ಸ್ಥಗಿತಗೊಳಿಸಿದ (ವೈಂಡಿಂಗ್ ಅಪ್) ರೀತಿಯ ಕುರಿತು ಲೆಕ್ಕ ಪತ್ರ ಹಾಜರುಪಡಿಸುವುದು ಮತ್ತು ಕಂಪನಿಯ ಆಸ್ತಿ-ಪಾಸ್ತಿ ವಿಲೇವಾರಿ ಮಾಡಿದ ಕ್ರಮ ಹಾಗೂ ಲಿಕ್ವಿಡೇಟರ್ ಕೊಡಬಹುದಾದ ವಿವರಣೆ ಆಲಿಸಲು ಮತ್ತು ಕಂಪನಿಯ ವಿಶೇಷ ಠರಾವಿನ ಪ್ರಕಾರ ಕಂಪನಿಯ ಮತ್ತು ಲಿಕ್ವಿಡೇಟರ್‌ನ ಕಡತಗಳು, ಲೆಕ್ಕಪತ್ರ ಮತ್ತು ದಾಖಲಾತಿಗಳನ್ನು ವಿಲೇವಾರಿ ಮಾಡುವುದರ ಸಂಬಂಧ ನಡೆಯಲಿದೆ ಎಂದು ಈ ಮೂಲಕ ನೋಟೀಸು ನೀಡಲಾಗಿದೆ.

ಸ್ಥಳ: ಬೆಂಗಳೂರು
ದಿನಾಂಕ: 29 ನವೆಂಬರ್ 2003 **ಎಸ್. ಕೆ. ಕಾಂತರಾಜ್**
ಪಿ.ಡಿ. 124 ಲಿಕ್ವಿಡೇಟರ್.

**6ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು ಮಹಾನಗರ**
**In Cmiss.441/03, ದಿನಾಂಕ: 24ನೇ ನವೆಂಬರ್ 2003**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ವಿಲ್ಸನ್‌ಗಾರ್ಡನ್ ಪೊಲೀಸ್ ಠಾಣಾ ಸರಹದ್ದಿನಲ್ಲಿ ವಾರಸುದಾರರಿಲ್ಲದೆ ಪತ್ತೆಯಾದ ಈ ಕೆಳಕಂಡ ಮಾಲು ಮತ್ತು ವಾಹನಗಳನ್ನು ಸದರಿ ಪೊಲೀಸರು ಅಮಾನತ್ತುಪಡಿಸಿದ್ದು ಈವರೆವಿಗೂ ಸದರಿ ಮಾಲುಗಳ ವಾರಸುದಾರರು ಪತ್ತೆಯಾಗಿರುವುದಿಲ್ಲ. ವಾರಸುದಾರರು ಯಾರಾದರೂ ಇದ್ದಲ್ಲಿ ತಮ್ಮ ವಾರಸುದಾರಿಕೆಯನ್ನು ಈ ವಿಷಯ ಪ್ರಕಟಗೊಂಡ 30 ದಿನಗಳ ಒಳಗಾಗಿ ರುಜುವಾತುಪಡಿಸಿ ತಮ್ಮ ಮಾಲುಗಳನ್ನು ಪಡೆಯಬಹುದಾಗಿದೆ. ತಪ್ಪಿದಲ್ಲಿ ಸದರಿ ಮಾಲುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು.

**ವಾರಸುದಾರರಿಲ್ಲದ ಮಾಲು ಮತ್ತು ವಾಹನಗಳ ವಿವರ**

| ಕ್ರ.ಸಂ. | ಮೊ.ಸಂ. ಮತ್ತು ಕಲಂ | ಮಾಲುಪಟ್ಟಿ ಸಂಖ್ಯೆ | ಮಾಲುಗಳ ವಿವರ |
|---|---|---|---|
| 1 | 621/99 ಕಲಂ 41 (ಡಿ) ರೆ/ವಿ 102 ಸಿ.ಆರ್.ಪಿ.ಸಿ. | 99/99 | ಒಂದು ಆರ್.ಎಕ್ಸ್-100 ಯಮಹಾ ಮೋಟಾರು ಸೈಕಲ್, ನಂ.ಕೆ.ಎ-04-ಎಸ್-5865, ಚಾಸಿಸ್ ನಂ.1 ಎಲ್ 1-237370 ಇಂಜಿನ್ ನಂ.1 ಎಲ್ 1-237370, ನೀಲಿ ಬಣ್ಣ. |

| ಕ್ರ.ಸಂ. | ಸಿಮೀಸ್ ಸಂಖ್ಯೆ | ಮಾಲುಪಟ್ಟಿ ಸಂಖ್ಯೆ | ಮಾಲುಗಳ ವಿವರ |
|---|---|---|---|
| 1 | 364/99 | 30/99 | ಒಂದು ಹೀರೋ ಹೊಂಡಾ ಮೋಟಾರು ಸೈಕಲ್, ನಂ. ಟಿ.ಸಿ.ವೈ-2588, ಚಾಸಿಸ್ ನಂ.ಬಿ 10ಎಫ್-077984, ಇಂಜಿನ್ ನಂ.ಬಿ10ಇ-078022, ಕಪ್ಪು ಬಣ್ಣ. |
| 2 | 152/03 | 026/03 | 1. ಒಂದು ಆಲ್ವಿನ್ ಪುಷ್ಪಕ್ ಸ್ಕೂಟರ್, ನಂ. ಕೆಎ-04-ಇ-928, ಚಾಸಿಸ್ ನಂ.ಎಪಿ-059169, ಇಂಜಿನ್ ನಂ.273926, ಕಪ್ಪು ಬಣ್ಣ. 2. ಒಂದು ಕೈನೆಟಿಕ್ ಪ್ರೈಡ್ ಸ್ಕೂಟರ್, ನಂ.ಕೆಎ-01-ವಿ-7721, ಚಾಸಿಸ್ ನಂ.97ಸಿ-29002868, |

| ಕ್ರ.ಸಂ. | ಸಿಮೀಸ್ ಸಂಖ್ಯೆ | ಮಾಲುಪಟ್ಟಿ ಸಂಖ್ಯೆ | ಮಾಲುಗಳ ವಿವರ |
|---|---|---|---|
| 3 | 153/03 | 027/03 | ಇಂಜಿನ್ ನಂ.97ಸಿ-29003125, ಕೆಂಪು ಬಣ್ಣ. ಒಂದು ಟಿ.ವಿ.ಎಸ್-50 ಮೊಪೆಡ್, ನಂ. ಸಿ.ಕೆ.ಜೆ-9024, ಚಾಸಿಸ್ ನಂ.521009-01-88, ಇಂಜಿನ್ ನಂ.521728-01-88, ಕಂದು ಬಣ್ಣ. |
| 4 | 154/03 | 028/03 | ಒಂದು ಆಲ್ವಿನ್ ಪುಷ್ಪಕ್ ಸ್ಕೂಟರ್, ನಂ. ಸಿಎಬಿ-8120, ಚಾಸಿಸ್ ನಂ.ಎಪಿ-039767, ಇಂಜಿನ್ ನಂ.193782, ಬಿಳಿಯ ಬಣ್ಣ. |
| 5 | 155/03 | 029/03 | 1. ಒಂದು ಕೈನೆಟಿಕ್ ಲೂನಾ ಮೊಪೆಡ್, ನಂ.ಸಿ.ಎ.ಎನ್-1565, ಚಾಸಿಸ್ ನಂ. ಎಲ್.ಐ.17285, ಇಂಜಿನ್ ನಂ. ಇಲ್ಲ, ಮೆರೂನ್ ಬಣ್ಣ.<br>2. ಒಂದು ಹಿರೋ ಮೆಜೆಸ್ಟಿಕ್ ಮೊಪೆಡ್, ನಂ. ಸಿ.ಆರ್.ಎಂ-7121, ಚಾಸಿಸ್ ನಂ.504184, ಇಂಜಿನ್ ನಂ. ಇಲ್ಲ, ಸಿಲ್ವರ್ ಬಣ್ಣ. |
| 6 | 156/03 | 30/03 | ಒಂದು ಆರ್ ಎಕ್ಸ್-100 ಯಮಹಾ ಮೋಟಾರ್ ಸೈಕಲ್, ನಂ. ಎ.ಪಿ-02-ಬಿ-4188, ಚಾಸಿಸ್ ನಂ. ಐಎಲ್ಐ-336739 ಇಂಜಿನ್ ನಂ. ಐಎಲ್ಐ-336739, ಕೆಂಪು ಬಣ್ಣ. |
| 7 | 157/03 | 031/03 | ಒಂದು ವಿಜಯ್ ಸೂಪರ್ ಸ್ಕೂಟರ್, ನಂ. ಎಂ.ಇ.ಜೆ-2307, ಚಾಸಿಸ್ ನಂ.ಎಸ್22-0097374, ಇಂಜಿನ್ ನಂ. ಎಸ್‌ಡಿಎಲ್-150018372, ಬಿಳಿ ಬಣ್ಣ |
| 8 | 158/03 | 32/03 | 1. ಒಂದು ಹೀರೋ ಹೊಂಡಾ ಸಿಡಿ-100 ಎಸ್.ಎಸ್. ಮೋಟಾರು ಸೈಕಲ್, ನಂ. ಎ.ಪಿ-31-ಇ-5004, ಚಾಸಿಸ್ ನಂ.ಹೆಚ್12ಎಫ್-073369, ಇಂಜಿನ್ ನಂ. ಹೆಚ್10ಇ-701907, ಕಪ್ಪು ಬಣ್ಣ.<br>2. ಒಂದು ಕವಾಸಕಿ ಬಜಾಜ್ ಮೋಟಾರು ಸೈಕಲ್, ನಂ. ಕೆಎ-01-ಹೆಚ್-6927, ಚಾಸಿಸ್ ನಂ.ಎಫ್31ಡಿಜಿ-015977, ಇಂಜಿನ್ ನಂ. ಎಂ31ಡಿಜಿ-016137, ಮೆರೂನ್ ಬಣ್ಣ. |
| 9 | 163/03 | 33/03 | ಒಂದು ಬಜಾಜ್-150 ಸ್ಕೂಟರ್, ನಂ. ಡಿ.ಎಚ್.ವಿ-8031, ಚಾಸಿಸ್ ನಂ.03ಸಿ-309-108529, ಇಂಜಿನ್ ನಂ.03ಇ-310-108773, ನೀಲಿ ಬಣ್ಣ. |
| 10 | 164/03 | 35/03 | ಒಂದು ಕೈನೆಟಿಕ್ ಪ್ರೈಡ್ ಸ್ಕೂಟರ್, ನಂ.ಕೆಎ-04-ಕ್ಯೂ-4854, ಚಾಸಿಸ್ ನಂ.ಎಂ29-023999, ಇಂಜಿನ್ ನಂ.95ಹೆಚ್-29015989, ನೀಲಿ ಬಣ್ಣ. |
| 11 | 168/03 | 38/03 | ಒಂದು ಆರ್.ಎಕ್ಸ್-135 ಯಮಹಾ ಮೋಟಾರು ಸೈಕಲ್, ನಂ. ಕೆಎ-04-ಹೆಚ್-7992, ಚಾಸಿಸ್ ನಂ.99ಹೆಚ್1ಎಲ್5-265858, ಇಂಜಿನ್ ನಂ.1ಎಲ್5-265858, ಕಪ್ಪು ಬಣ್ಣ. |
| 12 | 169/03 | 39/03 | ಒಂದು ಅಶೋಕ್ ಲೇಲ್ಯಾಂಡ್ ಲಾರಿಯ ಇಂಜಿನ್ ಇಲ್ಲದ ತುಕ್ಕು ಹಿಡಿದಿರುವ ಬಾಡಿ, ನಾಲ್ಕು ಟೈರುಗಳಿದ್ದು, ಚಾಸಿಸ್ ನಂಬರ್ ಮತ್ತು ನೋಂದಣಿ ಸಂಖ್ಯೆ ಇರುವುದಿಲ್ಲ. |
| 13 | 171/03 | 41/03 | ಒಂದು ಆರ್.ಎಕ್ಸ್-100 ಯಮಹಾ ಮೋಟಾರು ಸೈಕಲ್, ನಂ.ಸಿ.ಕೆ.ಕೆ-4200, ಚಾಸಿಸ್ ನಂ.1ಎಲ್4-080185, ಇಂಜಿನ್ ನಂ.1ಎಲ್4-080185, ಕಪ್ಪು ಬಣ್ಣ. |
| 14 | 291/03 | 77/03 | ಒಂದು ಕೈನೆಟಿಕ್ ಹೊಂಡಾ ಸ್ಕೂಟರ್, ನಂ.ಇಲ್ಲ, ಚಾಸಿಸ್ ನಂ.ಎನ್ಐಎಫ್-ಡಿ-071043, ಇಂಜಿನ್ ನಂ.ಎನ್ಐಇ-ಡಿ-069140, ಸಿಲ್ವರ್ ಬಣ್ಣ. |
| 15 | 435/99 | 49/99 | ಒಂದು ಹಳೆಯ ಟೆಂಪೋ ಟೈರ್ ಡಿಸ್ಕ್ ಸಮೇತ |
| 16 | 8/01 | 1/01 | ಒಂದು ಹಳೆಯ ಜಕಂ ಆಗಿರುವ ಜೆರಾಕ್ಸ್ ಮಿಷಿನ್ ಇದರ ಮೇಲೆ UV-120 R/E ಎಂದಿರುತ್ತದೆ. |
| 17 | 69/01 | 18/01 | ಒಂದು ಹಳೆಯ ಸೂಟ್‌ಕೇಸ್, ಇದರಲ್ಲಿ ಒಂದು ಮಿನಿಸ್ಟರ್ ಆಫ್ ರೈಲ್ವೇಸ್ ಇವರಿಂದ ಸೈಯದ್ ಬಷೀರ್ ಹುಸೇನ್ ಎಂಬ ಹೆಸರಿನ ಕಾಂಪ್ಲಿಮೆಂಟ್ರಿ ಕಾರ್ಡ್, ಪಾಸ್ ನಂ.367 ಎಂದಿರುತ್ತದೆ. |

**ಎನ್.ಎಸ್. ನೇಗಿನಾಳ್**

ಪಿ.ಆರ್. 1293 6ನೇ ಎ.ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು ಮಹಾನಗರ.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ:83:ಡಿಟಿಸಿಆರ್:2000-2001, ದಿನಾಂಕ: 20ನೇ ನವೆಂಬರ್ 2003**

**ಉಪಸ್ಥಿತರು:** ಗೋವಿಂದಪ್ಪ
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದ.ಕ.ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**
ಪೊಲೀಸ್ ಉಪ ನಿರೀಕ್ಷಕರು,
ಮಂಗಳೂರು ಪೂರ್ವ ಪೊಲೀಸ್ ಠಾಣೆ,
ಮಂಗಳೂರು.

**ವಿರುದ್ಧ**

**ಆರೋಪಿಗಳು:**
1) ಕೆ.ಎ. ಶ್ರೀನಿವಾಸನ್ ಯಾನೆ ಶೀನ (35 ವರ್ಷ)
ಬಿನ್ ದಿ: ಅಪ್ಪು ನಾಯರ್, ವಾಸ: ಕಿರುಡತ್ ಮನೆ, ನಡಕ್ಕಾವ
ಎಂ.ಎಂ.ಅಂ. ರಸ್ತೆ, ಕ್ಯಾಲಿಕಟ್ ಟೌನ್, ಕೇರಳ (ವಾಹನ ಚಾಲಕ)
2) ರಶೀದ್ ಸಿ.ಎಚ್ (ಪ್ರಾಯ 26 ವರ್ಷ) ಬಿನ್ ಕೆ.ಎ. ಹಸನ್,
ಕುನ್ನುಂಪುರತ್ ಮನೆ, ಪ್ರಿಯಾ ಟಾಕೀಸ್, ಕಣ್ಣೂಪುರಂ,
ಕಣ್ಣೂರು ಜಿಲ್ಲೆ, ಕೇರಳ ರಾಜ್ಯ.

**ವಾಹನ ಮಾಲೀಕರು:**
ಅಬ್ದುಲ್ ನಿಸಾರ್, ಬಿನ್ ಬಾವಾ, ಸವೀನಾ ಮಂಜಿಲ್,
ನಿರ್ಮಲಗಿರಿ ಪೋಸ್ಟ್, ಕೂತ್ತು ಪರಂಬ, ಕಣ್ಣೂರು ಜಿಲ್ಲೆ, ಕೇರಳ ರಾಜ್ಯ,
ಇವರ ಜಿ.ಪಿ.ಎ. ಹೋಲ್ಡರ್ ಆದ ಶ್ರೀ ಯು.ಎ. ಆಶ್ರಫ್,
ಬಿನ್ ಪಿ.ಕೆ. ಅಹಮದ್ ಹಾಜಿ, ಕಣ್ಣೂರು ಜಿಲ್ಲೆ, ಕೇರಳ ರಾಜ್ಯ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 21-9-2000 ರಂದು ಬೈಕಂಪಾಡಿ ಕಡೆಯಿಂದ ಕೇರಳದ ಕಡೆಗೆ ಮೀನಿನ ಬಾಕ್ಸ್‌ಗಳ ಅಡಿಯಲ್ಲಿ ಮದ್ಯದ ಬಾಕ್ಸ್‌ಗಳನ್ನು ಸಾಗಣೆ ಮಾಡುತ್ತಾರೆ ಎಂಬ ಖಚಿತ ಮಾಹಿತಿ ಮಂಗಳೂರು ಪೊಲೀಸ್ ಉಪ ಅಧೀಕ್ಷಕರಿಗೆ ದೊರೆತಿದ್ದು, ಅವರು ಮಂಗಳೂರು ಪೂರ್ವ ಠಾಣೆಯ ಆರಕ್ಷಕ ಉಪ ನಿರೀಕ್ಷಕರು ಹಾಗೂ ಸಿಬ್ಬಂದಿಯೊಂದಿಗೆ ಇಲಾಖಾ ವಾಹನ ಸಂಖ್ಯೆ: ಕೆಎ-19-ಜೆ-70 ರಲ್ಲಿ ನಂತೂರು ಜಂಕ್ಷನ್‌ನಲ್ಲಿ ಕಾಯುತ್ತಿದ್ದಾಗ ಮಧ್ಯಾಹ್ನ 12.30ರ ಸಮಯ ಕೆ.ಪಿ.ಟಿ. ಕಡೆಯಿಂದ ವಾಹನ ಸಂಖ್ಯೆ: ಕೆಎಲ್-13ಎ-6869 ವಾಹನವು ನಂತೂರು ಜಂಕ್ಷನ್ ದಾಟಿ ಪಂಪ್‌ವೆಲ್ ಕಡೆಗೆ ಹೋಗುವ ರಸ್ತೆಯಲ್ಲಿ ಬರುತ್ತಲೇ ಸದ್ರಿ ಲಾರಿಯನ್ನು ತಡೆದು ನಿಲ್ಲಿಸಿ ಲಾರಿಯ ಚಾಲಕ ಮತ್ತು ಕ್ಲೀನರ್‌ಗಳ ಹೆಸರು, ವಿಳಾಸ ಕೇಳಲಾಗಿ ಅವರು ಕ್ರಮವಾಗಿ ಕೆ.ಎ. ಶ್ರೀನಿವಾಸನ್ ಯಾನೆ ಶೀನ (35 ವರ್ಷ) ಬಿನ್: ದಿ. ಅಪ್ಪು ನಾಯರ್, ವಾಸ ಕಿರುಡತೆ ಮನೆ, ನಡಕ್ಕಾವ ಎಂ.ಎಂ. ಅಲಿ ರಸ್ತೆ, ಕ್ಯಾಲಿಕಟ್ ಟೌನ್, ಕೇರಳ (ವಾಹನ ಚಾಲಕ) ಎಂದೂ ಕ್ಲೀನರ್ ರಶೀದ್, ಸಿ.ಎಚ್. (ಪ್ರಾಯ 26 ವರ್ಷ) ಬಿನ್ ಕೆ.ಎ. ಹಸನ್, ಕುನ್ನುಂಪುರತ್ ಮನೆ, ಪ್ರಿಯಾ ಟಾಕೀಸ್, ಕಣ್ಣೂಪುರಂ, ಕಣ್ಣೂರು ಜಿಲ್ಲೆ, ಕೇರಳ ರಾಜ್ಯ ಎಂದು ತಿಳಿಸಿರುತ್ತಾರೆ. ವಾಹನದಲ್ಲಿ ತುಂಬಿರುವ ಸರಕಿನ ಬಗ್ಗೆ ವಿಚಾರಿಸಲಾಗಿ ವಾಹನದಲ್ಲಿ ಐಸ್‌ನಲ್ಲಿ ಮೀನು ಹಾಕಿ ಪಣಂಬೂರಿನಿಂದ ಕ್ಯಾಲಿಕಟ್‌ಗೆ ಸಾಗಿಸುತ್ತಿರುವುದಾಗಿ ತಿಳಿಸಿದ್ದು, ನಂತರ ಪಂಚರನ್ನು ಸ್ಥಳಕ್ಕೆ ಬರಮಾಡಿಕೊಂಡು ಪಂಚರ ಸಮಕ್ಷಮ ಲಾರಿಗೆ ಬಿಗಿದಿರುವ ಟರ್ಪಾಲನ್ನು ಬಿಚ್ಚಿ ನೋಡಲಾಗಿ ಲಾರಿಯಲ್ಲಿ ಕ್ಯಾಬಿನ್ ಭಾಗವನ್ನು ಬಿಟ್ಟು ಉಳಿದ ಮೂರು ಭಾಗಗಳಲ್ಲಿ ಮೀನಿನ ಬಾಕ್ಸ್‌ಗಳನ್ನು ತುಂಬಿ ಈ ಬಾಕ್ಸ್‌ಗಳ ಮಧ್ಯದಲ್ಲಿ ಮದ್ಯದ ಬಾಟ್ಲಿಗಳು ತುಂಬಿಸಿರುವ ರಟ್ಟಿನ ಬಾಕ್ಸ್‌ಗಳನ್ನು ತುಂಬಿದ್ದು ಪರಿಶೀಲನೆ ಮಾಡಲಾಗಿ ಈ ಕೆಳಕಂಡ ಮದ್ಯದ ಬಾಟ್ಲಿಗಳು ಕಂಡು ಬಂದಿರುತ್ತವೆ.

1) ಎ.ಜೆ. ಫೈನ್ ಬ್ರಾಂಡಿ 750 ಮಿಲಿಯ ತಲಾ 12 ಬಾಟ್ಲಿಗಳಿರುವ 120 ರಟ್ಟಿನ ಪೆಟ್ಟಿಗೆಗಳು.
2) ಎ.ಜೆ. ಫೈನ್ ಬ್ರಾಂಡಿ 375 ಮಿಲಿಯ ತಲಾ 24 ಬಾಟ್ಲಿಗಳಿರುವ 100 ರಟ್ಟಿನ ಪೆಟ್ಟಿಗೆಗಳು.
3) ಎ.ಜೆ. ಫೈನ್ ಬ್ರಾಂಡಿ 180 ಮಿಲಿಯ ತಲಾ 48 ಬಾಟ್ಲಿಗಳಿರುವ 60 ರಟ್ಟಿನ ಪೆಟ್ಟಿಗೆಗಳು.

ಒಟ್ಟು 280 ರಟ್ಟಿನ ಪೆಟ್ಟಿಗೆಗಳಿರುವುದು ಕಂಡು ಬಂದಿರುತ್ತದೆ. ಈ ಬಗ್ಗೆ ಯಾವುದೇ ದಾಖಲೆ ಪತ್ರಗಳ ಬಗ್ಗೆ ವಿಚಾರ ಮಾಡಲು, ತಮ್ಮಲ್ಲಿ ಯಾವುದೇ ರಹದಾರಿಯ ದಾಖಲೆ ಪತ್ರಗಳು ಇಲ್ಲವೆಂದು, ತಾವುಗಳು ಬೈಕಂಪಾಡಿಯಲ್ಲಿರುವ ಡಿಸ್ಟಿಲರಿಯಿಂದ ಕೇರಳ ರಾಜ್ಯದ ಕೋಯಿಕ್ಕೋಡಿಗೆ ಸಾಗಿಸುತ್ತಿರುವುದಾಗಿ ತಿಳಿಸಿರುತ್ತಾರೆ. ಈ ಮೇಲಿನ ಮದ್ಯದ ಪೆಟ್ಟಿಗೆಗಳ ಸುತ್ತಲೂ ನೀಲಿ ಮತ್ತು ಹಸಿರು ಬಣ್ಣದ ಪ್ಲಾಸ್ಟಿಕ್ ಬಾಕ್ಸ್‌ಗಳಿದ್ದು ಅವುಗಳಲ್ಲಿ ಐಸ್ ಮತ್ತು ಮೀನು ಇರುವುದು ಕಂಡು ಬಂದಿರುತ್ತದೆ. ಐಸ್ ಮತ್ತು ಮೀನನ್ನು ಸ್ಥಳದಲ್ಲಿಯೇ ನಾಶಪಡಿಸಿ ಈ ಮೇಲಿನ ಮದ್ಯದಿಂದ ರಾಸಾಯನಿಕ ಪರೀಕ್ಷೆಯ ಸಲುವಾಗಿ ವಿವಿಧ ಸಾಮರ್ಥ್ಯದ ಮೂರು ಬಾಟ್ಲಿಗಳನ್ನು ತೆಗೆದು ಬಾಟ್ಲಿಗಳ ಬಾಯಿಯನ್ನು ಬಟ್ಟೆಯಿಂದ ಸುತ್ತಿ ಎಸ್.ಹೆಚ್.ಓ. ಎಂಬ ಸೀಲ್‌ನಿಂದ ಸೀಲ್ ಮಾಡಿರುತ್ತದೆ. ಮತ್ತು ಲಾರಿಗೆ ಸಂಬಂಧಪಟ್ಟಂತೆ ಯಾವುದೇ ದಾಖಲೆ ಪತ್ರಗಳು ದೊರೆತಿರುವುದಿಲ್ಲ. ನಂತರ ದೊರೆತ 280 ಪೆಟ್ಟಿಗೆ ಮದ್ಯದ ಬಾಟ್ಲಿಗಳನ್ನೂ, ಲಾರಿಯನ್ನೂ ಮತ್ತು ಮೂವತ್ತೊಂದು ಖಾಲಿ ಪ್ಲಾಸ್ಟಿಕ್ ಬಾಕ್ಸ್‌ಗಳನ್ನು, ನೀಲಿ ಬಣ್ಣದ ಟರ್ಪಾಲ್ ಮತ್ತು ನೈಲಾನ್ ಹಗ್ಗವನ್ನು ಪಂಚರ ಸಮಕ್ಷಮ ಸ್ಥಳ ಮಹಜರಿನ ಮೂಲಕ ವಶಕ್ಕೆ ತೆಗೆದುಕೊಂಡು ಈ ಸಂಬಂಧ ಹಾಜರಿದ್ದ ವಾಹನ ಚಾಲಕ ಹಾಗೂ ಕ್ಲೀನರ್ ಇಬ್ಬರನ್ನೂ ದಸ್ತಗಿರಿ ಮಾಡಿರುತ್ತಾರೆ. ಆರೋಪಿಗಳು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 32, 34, 43 (3)ರ ಪ್ರಕಾರ ಅಪರಾಧವೆಸಗಿರುವುದರಿಂದ ಆರೋಪಿಗಳ ವಿರುದ್ಧ ತಕ್ಷೀರನ್ನು ಸಂಖ್ಯೆ: 220/2000ರ ಮೂಲಕ ದಾಖಲುಪಡಿಸಿ ಈ ಪ್ರಾಧಿಕಾರದ ಅನುಮತಿ ಮೇರೆಗೆ ಪ್ರಕರಣವನ್ನು ಅಬಕಾರಿ ನಿರೀಕ್ಷಕರು, ಕುಲಶೇಖರ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಈ ಪ್ರಾಧಿಕಾರವು ಅಬಕಾರಿ ನಿರೀಕ್ಷಕರು, ಕುಲಶೇಖರ ವಲಯ ಇವರಿಗೆ ಪ್ರಕರಣದ ತನಿಖೆಯನ್ನು ಕೈಗೊಂಡು ವರದಿ ಸಲ್ಲಿಸಲು ನಿರ್ದೇಶಿಸಿರುತ್ತದೆ. ಅಬಕಾರಿ ನಿರೀಕ್ಷಕರು ಪ್ರಕರಣದ ತನಿಖೆಯನ್ನು ಕೈಗೊಂಡು ರಾಸಾಯನಿಕ ವರದಿಯನ್ನು ಪಡೆದಿದ್ದು, ಸದ್ರಿ ಮದ್ಯವು ಕೇರಳ ರಾಜ್ಯದಲ್ಲಿ ಮಾರಾಟಕ್ಕೆ ಮಾತ್ರ ಎಂದು ನಮೂದಿಸಿರುವ ಲೇಬಲ್‌ಗಳಿರುವುದರಿಂದ ಮದ್ಯವನ್ನು ನಾಶಪಡಿಸಲು ಹಾಗೂ ಉಳಿದ ವಸ್ತುಗಳನ್ನು ಹರಾಜು ಮೂಲಕ ವಿಲೇವಾರಿ ಮಾಡಲು ಆದೇಶವನ್ನು ಕೋರಿರುತ್ತಾರೆ. ಅದರಂತೆ ಪ್ರಾಧಿಕಾರವು ಕೇರಳ ರಾಜ್ಯದ ಮದ್ಯ ಮಾರಾಟ ನಿಗಮಕ್ಕೆ ಪತ್ರ ವ್ಯವಹಾರ ಮಾಡಿದ್ದು, ನಿಗಮವು ಜಪ್ತು ಮಾಡಿರುವ ಮದ್ಯವನ್ನು ಖರೀದಿಸಲು ಆಗುವುದಿಲ್ಲ ಎಂಬುದಾಗಿ ತಿಳಿಸಿದ್ದರಿಂದ, ಅಬಕಾರಿ ಆಯುಕ್ತರ ನಿರ್ದೇಶನದಂತೆ ಮದ್ಯವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮದ್ಯವನ್ನು ನಿಯಮ 43(ಎ) 3ರ ಅನ್ವಯ ನಾಶಪಡಿಸಲು ಆದೇಶ ನೀಡಿರುತ್ತದೆ.

ದಿನಾಂಕ: 19.1.2001 ರಂದು ಈ ಪ್ರಕರಣದಲ್ಲಿ ಜಪ್ತುಪಡಿಸಿದ್ದ ವಾಹನ ಮಾಲೀಕರಾದ ಶ್ರೀ ಅಬ್ದುಲ್ ನಿಸ್ಸಾರ್ ಇವರಿಂದ ಅಧಿಕಾರ ಹೊಂದಿರುವ ಶ್ರೀ ಯು.ಎ. ಅಶ್ರಫ್, ಬಿನ್: ಪಿ.ಕೆ. ಅಹಮದ್ ಹಾಜಿ, ಕಣ್ಣೂರು ಜಿಲ್ಲೆ, ಕೇರಳ ಇವರು ತಮ್ಮ ವಕೀಲರ ಮೂಲಕ ವಾಹನದ ಮಧ್ಯಂತರ ಬಿಡುಗಡೆಗಾಗಿ ಅರ್ಜಿಯನ್ನು ಸಲ್ಲಿಸಿದ್ದು, ಸದ್ರಿ ಅರ್ಜಿಯನ್ನು ಪ್ರಾಧಿಕಾರವು ಪುರಸ್ಕರಿಸಿರುವುದಿಲ್ಲ. ದಿನಾಂಕ: 13.9.2002 ರಂದು ಈ ಪ್ರಾಧಿಕಾರವು ವಾಹನ ಮಾಲೀಕರಿಗೆ ಕಾರಣ ಕೇಳಿ ನೋಟೀಸನ್ನು ನೀಡಿರುತ್ತದೆ. ಆದರೆ ವಾಹನ ಮಾಲೀಕರಿಂದ ಕಾರಣ ಕೇಳಿ ನೀಡಿದ ನೋಟೀಸಿಗೆ ಯಾವುದೇ ಉತ್ತರ ಬಂದಿರುವುದಿಲ್ಲ. ನಂತರ ಪ್ರಕರಣವನ್ನು ವಿಚಾರಣೆಗೆ ತೆಗೆದುಕೊಂಡು ಅರ್ಜಿದಾರರಿಗೂ, ಅರ್ಜಿದಾರರ ಪರ ವಕೀಲರಿಗೂ ನೋಟೀಸನ್ನು ಪ್ರಾಧಿಕಾರವು ನೀಡಿದ್ದು ದಿನಾಂಕ: 5.12.2002 ರಂದು ಅರ್ಜಿದಾರರ ಪರ ವಕೀಲರು ಹಾಜರಾಗಿ ವಾಹನದ ಮಧ್ಯಂತರ ಬಿಡುಗಡೆಯ ಬಗ್ಗೆ ವಾದ ವಿವಾದಕ್ಕೆ ಸಮಯಾವಕಾಶವನ್ನು ಕೋರಿರುತ್ತಾರೆ. ನಂತರ ವಕೀಲರು ದಿನಾಂಕ: 12.12.2002, 26.12.2002 ಮತ್ತು 16.01.2003 ರಂದು ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನದ ಮಧ್ಯಂತರ ಬಿಡುಗಡೆಗೆ ವಾದ ವಿವಾದಕ್ಕೆ ಸಮಯಾವಕಾಶವನ್ನು ಕೋರಿದ್ದು ಅವರು ತಮ್ಮ ವಾದವನ್ನು ಮಂಡಿಸಿರುವುದಿಲ್ಲ. ನಂತರದ ದಿನಗಳಲ್ಲಿ ವಕೀಲರು ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ದಿನಾಂಕ: 13.03.2003 ರಂದು ವಕೀಲರು ನ್ಯಾಯಾಲಯಕ್ಕೆ ಗೈರು ಹಾಜರಾಗಿದ್ದು ಸಹಾಯಕ ಅಭಿಯೋಜಕ ನಿರ್ದೇಶಕರು ಇವರು ತಮ್ಮ ವಾದವನ್ನು ಮಂಡಿಸಿದ್ದು ಮಕೀಲರಿಗೆ ಮತ್ತೊಂದು ಅವಕಾಶವನ್ನು ನೀಡಿ ಪ್ರಕರಣವನ್ನು ದಿನಾಂಕ: 29.8.2003ಕ್ಕೆ ಮುಂದೂಡಿದ್ದು, ಸದ್ರಿ ದಿನದಂದು ವಕೀಲರು ಗೈರು ಹಾಜರಿದ್ದ ಕಾರಣ ಅರ್ಜಿದಾರರು ಮಧ್ಯಂತರ ಬಿಡುಗಡೆಗೆ ಸಲ್ಲಿಸಲಾಗಿದ್ದ ಅರ್ಜಿಯನ್ನು ಪ್ರಾಧಿಕಾರವು ತಿರಸ್ಕರಿಸಿ ಆದೇಶ ನೀಡಿರುತ್ತದೆ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ ಸರ್ಕಾರದ ಅಭಿಯೋಜನೆಯ ಪರ ಮೂರು ಸಾಕ್ಷಿಗಳನ್ನು ವಿಚಾರಣೆಗೆ ಒಳಪಡಿಸಿ ಅವರುಗಳ ಹೇಳಿಕೆಯನ್ನು ಪಡೆಯಲಾಗಿದೆ. ಈ ಪ್ರಕರಣದಲ್ಲಿ ಸರ್ಕಾರದ ಪರ ಸಲ್ಲಿಸಲಾಗಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತವೆ.

1) 21.9.2000 ರಂದು ವಾಹನ ಮಿನಿ ಲಾರಿ ಸಂಖ್ಯೆ: ಕೆಎಲ್-13ಎ-6869 ರಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಾಟ ಮಾಡಲಾಗಿತ್ತೇ?

2) ಅರ್ಜಿದಾರರು ವಶಪಡಿಸಿಕೊಂಡಿರುವ ವಾಹನ ಮಾಲೀಕ ತಾನೆಂದು, ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಮದ್ಯ ಸಾಗಣೆಗೆ ಉಪಯೋಗಿಸಲ್ಪಟ್ಟಿದೆ ಎಂಬುದನ್ನು ಸಾಬೀತು ಪಡಿಸಿದ್ದಾರೆಯೇ?

3) ಜಪ್ತುಪಡಿಸಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷಿ ಆಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದೂ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಇಲ್ಲ ಎಂದೂ ಹಾಗೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ.3:-**

ಶ್ರೀ ಮೋಹನ್ ಕೆ.ವಿ., ಪಿ.ಸಿ. 1133, ಮಂಗಳೂರು ಬಂದರು ಪೊಲೀಸ್ ಠಾಣೆ ಇವರು ಪ್ರಕರಣದ ಫಿರ್ಯಾದುದಾರರಾಗಿದ್ದು ಇವರು ದಿನಾಂಕ: 23.10.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ದಿನಾಂಕ: 21.09.2000 ರಂದು ಬೆಳಿಗ್ಗೆ 11.30 ಕ್ಕೆ ಮಂಗಳೂರು ನಗರದ ಪೊಲೀಸ್ ಉಪ ಅಧೀಕ್ಷಕರೊಂದಿಗೆ ಮತ್ತು ಸಿಬ್ಬಂದಿಯೊಂದಿಗೆ ಪೂರ್ವ ಠಾಣೆಗೆ ಹೋಗಿ ಅಲ್ಲಿಂದ ನಂತೂರು ಜಂಕ್ಷನ್‌ಗೆ ಬಂದೆವು. ಖಚಿತ ವರ್ತಮಾನದ ಮೇರೆಗೆ ನಂತೂರ್ ಜಂಕ್ಷನ್‌ನಲ್ಲಿ ವಾಹನವನ್ನು ಕಾಯುತ್ತಾ ನಿಂತೆವು. ಸುಮಾರು 12.15 ಗಂಟೆ ಸಮಯಕ್ಕೆ ಕೆ.ಪಿ.ಟಿ. ಕಡೆಯಿಂದ ಪಂಪ್‌ವೆಲ್ ಕಡೆಗೆ ಒಂದು ಮಿನಿ ಲಾರಿ ಬಂದಿತು. ಅದನ್ನು ತಡೆದು ನಿಲ್ಲಿಸಿದೆವು. ಲಾರಿಗೆ ಮುಚ್ಚಿದ್ದ ಟರ್ಪಾಲನ್ನು ತೆಗೆದು ಪರಿಶೀಲಿಸಲಾಗಿ ಮೀನು ತುಂಬಿದ ನೀಲಿ ಮತ್ತು ಹಸಿರು ಬಣ್ಣದ ಬಾಕ್ಸ್‌ಗಳು ಇದ್ದವು. ಸದ್ರಿ ಬಾಕ್ಸ್‌ಗಳಲ್ಲಿ ಮಂಜುಗಡ್ಡೆ ಮತ್ತು ಕೊಳೆತ ಮೀನು ಇರುವುದು ಕಂಡು ಬಂತು. ಸದ್ರಿ ಬಾಕ್ಸ್‌ಗಳನ್ನು ತೆಗೆದು ನೋಡಲಾಗಿ ಅಡಿಯಲ್ಲಿ ರಟ್ಟಿನ ಬಾಕ್ಸ್‌ಗಳು ಇರುವುದು ಕಂಡು ಬಂತು. ಸದ್ರಿ ಬಾಕ್ಸ್‌ಗಳನ್ನು ತೆಗೆದು ನೋಡಲಾಗಿ ಅವುಗಳಲ್ಲಿ ಎ.ಜೆ.ಫೈನ್ ಬ್ರಾಂಡಿ ಬಾಟ್ಲಿಗಳಿದ್ದವು. ಸದ್ರಿ ಬಾಕ್ಸ್‌ಗಳ ಮೇಲೆ ಎ.ಜೆ.ಡಿಸ್ಟಿಲರಿ ಎಂದು ಬರೆದಿತ್ತು. ಬಾಟ್ಲಿಗಳನ್ನು ಪರಿಶೀಲನೆ ಮಾಡಲು 750 ಮಿಲಿಯ 12 ಬಾಟ್ಲಿಗಳ 120 ಪೆಟ್ಟಿಗೆಗಳಿದ್ದವು. 375 ಮಿಲಿಯ 24 ಬಾಟ್ಲಿಗಳಿರುವ 100 ಬಾಕ್ಸ್‌ಗಳಿದ್ದವು ಮತ್ತು 180 ಮಿಲಿಯ 48 ಬಾಟ್ಲಿಗಳಿರುವ 60 ಬಾಕ್ಸ್‌ಗಳಿದ್ದವು. ಇವುಗಳನ್ನು ಸಾಗಿಸಲು ಪರ್ಮಿಟ್ ಬಗ್ಗೆ ವಿಚಾರ ಮಾಡಲಾಗಿ ತಮ್ಮಲ್ಲಿ ಯಾವುದೇ ದಾಖಲೆಗಳು ಇಲ್ಲವೆಂದು ತಿಳಿಸಿದರು. ಸದ್ರಿ ಲಾರಿಯಲ್ಲಿ ಡ್ರೈವರ್, ಕ್ಲೀನರ್‌ಗಳನ್ನು ಬಿಟ್ಟರೆ ಬೇರೆ ಯಾರೂ ಇರಲಿಲ್ಲ. ನಂತರ ಸ್ಥಳಕ್ಕೆ ಪಂಚರನ್ನು ಕರೆಸಿ ಸದ್ರಿ ಬಾಕ್ಸ್‌ಗಳಿಂದ 750 ಎಂ.ಎಲ್., 375 ಎಂ.ಎಲ್. ಹಾಗೂ 180 ಎಂ.ಎಲ್. ನ ಮೂರು ಬಾಟ್ಲಿಗಳನ್ನು ತೆಗೆದು ಮಾದರಿ ಸೀಸೆಗಳನ್ನು ಪಂಚರ ಸಮಕ್ಷಮ ತಯಾರಿಸಿದೆವು. ಸದ್ರಿ ಮಾದರಿ ಸೀಸೆಗಳನ್ನು ಬಿಳಿ ಬಟ್ಟೆಗಳಿಂದ ಮುಚ್ಚಿ ಇಲಾಖಾ ಸೀಲ್‌ನಿಂದ ಸೀಲ್ ಮಾಡಿದೆವು. ಲಾರಿಯಲ್ಲಿ ಒಟ್ಟು 31 ಮೀನಿನ ಬಾಕ್ಸ್‌ಗಳಿದ್ದವು. ಸದ್ರಿ ಬಾಕ್ಸ್‌ಗಳಲ್ಲಿದ್ದ ಮಂಜುಗಡ್ಡೆ ಮತ್ತು ಮೀನನ್ನು ಸ್ಥಳದಲ್ಲಿಯೇ ನಾಶಪಡಿಸಿದೆವು. ದೊರೆತ ಲಾರಿ, ಮದ್ಯದ ಬಾಟ್ಲಿಗಳು

ಹಾಗೂ ಆರೋಪಿತರನ್ನು ವಶಕ್ಕೆ ತೆಗೆದುಕೊಂಡು ಸ್ಥಳದಲ್ಲಿಯೇ ಮಹಜರು ತಯಾರಿಸಿದೆವು. ಪಂಚನಾಮೆಯನ್ನು ನೋಡಿ ಅದರಲ್ಲಿ ಇರುವ ತನ್ನ ಸಹಿಯನ್ನು ಗುರುತಿಸಿದೆನು ಎಂದು ತಿಳಿಸಿರುತ್ತಾರೆ. ಸ್ಥಳ ಮಹಜರನ್ನು ನಿಶಾನೆ ಪಿ-2 ಎಂದು ಗುರುತಿಸಲಾಯಿತು. ಈ ಪ್ರಕರಣದ ಪ್ರಥಮ ಮಾಹಿತಿ ವರದಿಯನ್ನು ನೋಡಿ ಗುರುತಿಸಿದ್ದು ಅದನ್ನು ನಿಶಾನೆ ಪಿ-3 ಎಂದು ಗುರುತಿಸಲಾಯಿತು. ಮತ್ತು ಪ್ರಕರಣದ ಮುಂದಿನ ತನಿಖೆಯನ್ನು ನನ್ನ ಮೇಲಾಧಿಕಾರಿಗಳು ತೆಗೆದುಕೊಂಡಿರುತ್ತಾರೆ ಎಂದು ತಿಳಿಸಿರುತ್ತಾರೆ. ಪ್ರಕರಣದಲ್ಲಿ ವಶಪಡಿಸಿಕೊಂಡ ಲಾರಿ ಸಂಖ್ಯೆ: ಕೆಎಲ್-13ಎ-6869 ಎಂಬುದಾಗಿರುತ್ತದೆ ಎಂದು ತಿಳಿಸಿರುತ್ತಾರೆ. ಅರ್ಜಿದಾರರ ಪರ ವಕೀಲರು ಗೈರು ಹಾಜರಿದ್ದ ಕಾರಣ ಪಾಟೀ ಸವಾಲು ಇಲ್ಲ ಎಂದು ಪರಿಗಣಿಸಲಾಯಿತು.

**ಪ್ರಾ.ಸಾ.1:-**

ಶ್ರೀ ಅಜೀಜ್ ಪೆರ್ಮನ್ನೂರು ಅಬಕಾರಿ ನಿರೀಕ್ಷಕರು, ಕುಲಶೇಖರ ವಲಯ ಇವರು ಈ ಪ್ರಕರಣದ ತನಿಖಾಧಿಕಾರಿಯಾಗಿದ್ದು ದಿನಾಂಕ: 31.7.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿಯನ್ನು ನೀಡಿರುತ್ತಾರೆ. ದಿನಾಂಕ: 18.10.2000 ರಂದು ಪೊಲೀಸ್ ಉಪ ನಿರೀಕ್ಷಕರು, ಕಾನೂನು ಮತ್ತು ಶಿಸ್ತು ಪಾಲನೆ ಇವರ ಮೊಕದ್ದಮೆ ಸಂಖ್ಯೆ: 220/2000 ದಿನಾಂಕ: 21.9.2000ಕ್ಕೆ ಸಂಬಂಧಿಸಿದ ದಾಖಲೆ ಪತ್ರಗಳು ಹಾಗೂ ಸ್ವತ್ತುಗಳನ್ನು ಸ್ವೀಕರಿಸಿ ಅದೇ ದಿನ ರಾಸಾಯನಿಕ ವಿಶ್ಲೇಷಣಾ ತಜ್ಞರಿಗೆ ಮಾದರಿ ಸೀಸೆಗಳನ್ನು ಅಬಕಾರಿ ರಕ್ಷಕ ಶ್ರೀ ವಿಠಲ್ ಶೆಟ್ಟಿ ಇವರ ಮೂಲಕ ಕಳುಹಿಸಿದ್ದು, ದಿನಾಂಕ: 20.10.2000 ರಂದು ರಾಸಾಯನಿಕ ತಜ್ಞರ ವರದಿ ಹಾಗೂ ವಿಶ್ಲೇಷಿತ ಮಾದರಿ ಸೀಸೆಗಳನ್ನು ಹಿಂದಕ್ಕೆ ಪಡೆದುಕೊಂಡಿರುತ್ತೇನೆ. ಈ ಕುರಿತು ಅಧಿಕೃತ ಅಧಿಕಾರಿಗಳಿಗೆ ವರದಿಯನ್ನು ಸಲ್ಲಿಸಿರುತ್ತೇನೆ. ಸದ್ರಿ ವರದಿಯನ್ನು ನೋಡಿ ಅದನ್ನು ನಿಶಾನೆ ಪಿ-1 ಎಂದು ಗುರುತಿಸಲಾಯಿತು. ನೋಂದಣಿ ಸಂಖ್ಯೆ ಆಧಾರದ ಮೇಲೆ ವಾಹನ ಮಾಲೀಕರ ಮಾಹಿತಿ ಪಡೆದು ಅವರಿಗೆ ನೋಟೀಸು ಜಾರಿ ಮಾಡಿದರೂ ಸಹ ನಮಗೆ ಯಾವುದೇ ಮಾಹಿತಿ ದೊರೆತಿರುವುದಿಲ್ಲ. ವಶಪಡಿಸಿಕೊಂಡಿದ್ದ ಮದ್ಯವು ಕೇರಳ ರಾಜ್ಯದಲ್ಲಿ ಮಾರಾಟಕ್ಕೆ ಮಾತ್ರ ಎಂಬುದಾಗಿ ಇದ್ದ ಕಾರಣ ಮದ್ಯವನ್ನು ನಾಶಪಡಿಸಲು ಮತ್ತು ಪ್ಲಾಸ್ಟಿಕ್ ಟ್ರೇಗಳನ್ನು ಹರಾಜು ಮಾಡಲು ಕೋರಿ ಪತ್ರ ಬರೆದಿರುತ್ತೇನೆ. ಈ ಪ್ರಕರಣದ ತನಿಖೆ ಇನ್ನೂ ಬಾಕಿಯಿರುವ ಕಾರಣ ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಲು ಬಾಕಿ ಇರುವುದಾಗಿ ತಿಳಿಸಿ ತನ್ನ ಸಾಕ್ಷಿಯನ್ನು ನೀಡಿರುತ್ತಾರೆ. ಅರ್ಜಿದಾರರ ಪರ ವಕೀಲರು ಗೈರು ಹಾಜರಿದ್ದ ಕಾರಣ ಪಾಟೀ ಸವಾಲು ಇಲ್ಲ ಎಂದು ಪರಿಗಣಿಸಲಾಯಿತು.

**ಪ್ರಾ.ಸಾ. 2:-**

ಶ್ರೀ ವಿಠಲ್ ಶೆಟ್ಟಿ ಅಬಕಾರಿ ರಕ್ಷಕ, ಕುಲಶೇಖರ ವಲಯ ಇವರು ದಿನಾಂಕ: 21.8.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನೀಡಿರುತ್ತಾರೆ. ಅವರು ದಿನಾಂಕ: 18.10.2000 ರಂದು ಈ ಪ್ರಕರಣಕ್ಕೆ ಸಂಬಂಧಿಸಿದ 3 ಮಾದರಿ ಸೀಸೆಗಳನ್ನು ಅಬಕಾರಿ ನಿರೀಕ್ಷಕರು, ಕುಲಶೇಖರ ವಲಯ ಇವರಿಂದ ಪಡೆದು ರಾಸಾಯನಿಕ ತಜ್ಞರಿಗೆ ತಲುಪಿಸಿರುತ್ತೇನೆ. ದಿನಾಂಕ: 20.10.2000 ರಂದು ಸದ್ರಿ ಬಾಟ್ಲಿಗಳನ್ನು ರಾಸಾಯನಿಕ ತಜ್ಞರಿಂದ ಪಡೆದು ರಾಸಾಯನಿಕ ವರದಿಯೊಂದಿಗೆ ಕುಲಶೇಖರ ವಲಯದ ಅಬಕಾರಿ ನಿರೀಕ್ಷಕರಿಗೆ ತಲುಪಿಸಿರುತ್ತೇನೆ. ರಾಸಾಯನಿಕ ವರದಿಯನ್ನು ನೋಡಿ ಅದನ್ನು ನಿಶಾನೆ ಪಿ-1 ಎಂದು ಈಗಾಗಲೇ ಗುರುತಿಸಲಾಗಿದೆ. ಅರ್ಜಿದಾರರ ಪರ ವಕೀಲರು ಹಾಜರಿಲ್ಲದ ಕಾರಣ ಪಾಟೀ ಸವಾಲು ಇಲ್ಲ ಎಂದು ಪರಿಗಣಿಸಲಾಯಿತು.

ಈ ಪ್ರಕರಣದಲ್ಲಿ ವಿಚಾರಣೆಗಾಗಿ ಅರ್ಜಿದಾರರ ಪರ ವಕೀಲರಿಗೆ ಹಲವಾರು ಬಾರಿ ನೋಟೀಸು ನೀಡಿದ್ದು, ಸದ್ರಿ ನೋಟೀಸನ್ನು ವಕೀಲರು ಸ್ವೀಕರಿಸಿದ್ದು ಈ ನ್ಯಾಯಾಲಯದ ಮುಂದೆ ಹಾಜರಾಗಿರುವುದಿಲ್ಲ ಮತ್ತು ಪ್ರಕರಣದ ವಿಚಾರಣೆಗೆ ಸಹಕರಿಸಿರುವುದಿಲ್ಲ. ಈ ಕಾರಣದಿಂದ ಪ್ರಕರಣದ ವಿಚಾರಣೆಯನ್ನು ಅರ್ಜಿದಾರರ ಪರ ವಕೀಲರ ಗೈರು ಹಾಜರಿಯಲ್ಲಿ ನಡೆಸಲಾಗಿರುತ್ತದೆ.

ಮೇಲಿನ ಸಾಕ್ಷ್ಯಾಧಾರಗಳಿಂದ ಹಾಗೂ ಲಭ್ಯವಿರುವ ದಾಖಲೆಗಳಿಂದ ದಿನಾಂಕ: 21.9.2000 ರಂದು ವಾಹನ ಮಿನಿ ಲಾರಿ ಸಂಖ್ಯೆ: ಕೆಎಲ್-13ಎ-6869 ರಲ್ಲಿ ಅಕ್ರಮ ಮದ್ಯವು ಸಾಗಣೆಯಾಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಒಂದನೇ ವಿವಾದಾಂಶವನ್ನು ಗುಣಾತ್ಮಕವಾಗಿ ಹೌದು ಎಂದು ಪರಿಗಣಿಸುತ್ತೇನೆ.

ಸದರಿ ಅಪರಾಧವು ತನ್ನ ತಿಳುವಳಿಕೆಗೆ ಬಾರದೆ ನಡೆದಿರುತ್ತದೆ ಎಂದು ಸಾಬೀತುಪಡಿಸುವ ಜವಾಬ್ದಾರಿ ವಾಹನದ ನೋಂದಾಯಿತ ಮಾಲೀಕರದ್ದಾಗಿರುತ್ತದೆ. ಆದರೆ ಈ ಪ್ರಕರಣದಲ್ಲಿ ಜಪ್ತುಪಡಿಸಿರುವ ವಾಹನ ಮಾಲೀಕರಾಗಲೀ ಅಥವಾ ಅವರಿಂದ ಅಧಿಕಾರ ಪಡೆದ ವ್ಯಕ್ತಿಯಾಗಲೀ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಹಾಗೂ ಈ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ಒದಗಿಸಿರುವುದಿಲ್ಲ. ಆದುದರಿಂದ ವಾಹನ ಮಾಲೀಕರು ತನ್ನ ತಿಳುವಳಿಕೆಗೆ ಬಾರದೆ ಈ ಅಪರಾಧವು ನಡೆದಿರುತ್ತದೆ ಎಂಬುದನ್ನು ಸಾಬೀತುಪಡಿಸಲು ವಿಫಲರಾಗಿರುತ್ತಾರೆ. ಮತ್ತು ವಾಹನ ಮಾಲೀಕರ ಪರ ವಕೀಲರೂ ಸಹ, ನ್ಯಾಯಾಲಯವು ನೋಟೀಸು ನೀಡಿದ್ದರೂ ನ್ಯಾಯಾಲಯಕ್ಕೆ ಗೈರು ಹಾಜರಿರುತ್ತಾರೆ. ಈ ಕಾರಣದಿಂದ ವಾಹನ ಮಾಲೀಕರು ಈ ಅಪರಾಧದಲ್ಲಿ ತಾವೇ ಭಾಗಿಯಾಗಿರುವುದು ಖಚಿತ ಪಟ್ಟಿರುತ್ತದೆ. ಆದುದರಿಂದ ಎರಡನೇ ವಿವಾದಾಂಶವನ್ನು ನಕಾರಾತ್ಮಕವಾಗಿ ಇಲ್ಲ ಎಂದು ಪರಿಗಣಿಸಲಾಗಿದೆ.

ಈ ಎಲ್ಲಾ ಕಾರಣಗಳಿಂದ ಈ ಪ್ರಕರಣದಲ್ಲಿ ಜಪ್ತುಗೊಳಿಸಲಾಗಿರುವ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ:83:ಡಿಟಿಸಿಆರ್:2000-2001, ದಿನಾಂಕ: 20ನೇ ನವೆಂಬರ್ 2003**

ಗೋವಿಂದಪ್ಪ ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ಆದ ನಾನು 1965 ಕರ್ನಾಟಕ ಅಬಕಾರಿ ಅಧಿನಿಯಮ ಕಲಂ 43(ಎ)ರ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43 (ಬಿ)ರ ಅಡಿಯಲ್ಲಿ ಅನುಸರಿಸಬೇಕಾದ ವಿಧಿವಿಧಾನಗಳನ್ನು ಅನುಸರಿಸಿ ಪೊಲೀಸ್ ಉಪ ನಿರೀಕ್ಷಕರು, ಮಂಗಳೂರು ಪೂರ್ವ ಠಾಣೆ, ಮಂಗಳೂರು ಇವರು ದಾಖಲೆ ಮಾಡಿದ ಮೊಕದ್ದಮೆ ಸಂಖ್ಯೆ: 220/2000 ದಿನಾಂಕ: 21.09.2000 ರಲ್ಲಿ ಜಪ್ತುಪಡಿಸಿರುವ ವಾಹನ ಮಿನಿ ಲಾರಿ ಸಂಖ್ಯೆ: ಕೆಎಲ್-13ಎ-6869ನ್ನು ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 20.11.2003 ರಂದು ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಗೋವಿಂದಪ್ಪ**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದ.ಕ. ಜಿಲ್ಲೆ, ಮಂಗಳೂರು.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ.:1 - ಶ್ರೀ ಅಜೀಜ್ ಪೆರ್ಮನ್ನೂರು, ಅಬಕಾರಿ ನಿರೀಕ್ಷಕರು, ಕುಲಶೇಖರ ವಲಯ, ಕುಲಶೇಖರ.
ಪ್ರಾ.ಸಾ.:2 - ಶ್ರೀ ವಿಠಲ್ ಶೆಟ್ಟಿ ಅಬಕಾರಿ ರಕ್ಷಕ, ಕುಲಶೇಖರ ವಲಯ.
ಪ್ರಾ.ಸಾ.:3 - ಶ್ರೀ ಮೋಹನ್ ಕೆ.ವಿ., ಪಿ.ಸಿ. 1133, ಮಂಗಳೂರು ಬಂದರು ಪೊಲೀಸ್ ಠಾಣೆ.

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ1 - ರಾಸಾಯನಿಕ ತಜ್ಞರ ವರದಿ ಪ್ರತಿ.
ನಿಶಾನೆ ಪಿ2 - ಮಹಜರಿನ ಪ್ರತಿ.
ನಿಶಾನೆ ಪಿ3 - ಪ್ರಥಮ ಮಾಹಿತಿ ವರದಿ.

**ಅನುಬಂಧ-3**

**ವಾಹನ ಮಾಲೀಕರ ಪರ ವಿಚಾರಣೆ ಮಾಡಿದ ಸಾಕ್ಷಿದಾರರು:**

- ಇಲ್ಲ -

**ಅನುಬಂಧ-4**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು:**

- ಯಾವುದೂ ಇಲ್ಲ -

**ಗೋವಿಂದಪ್ಪ**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದ.ಕ. ಜಿಲ್ಲೆ, ಮಂಗಳೂರು.

ಪಿ.ಆರ್. 1290

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್:60.2003, ದಿನಾಂಕ: 13ನೇ ನವೆಂಬರ್ 2003**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1. ರೂಪಲಿ ಬಾಯಿ, ವಯಸ್ಸು 35 ವರ್ಷ ಕೋಂ ಶ್ಯಾಮಾನಾಯಕ್ | | 1) ಮಣಿಮನ್, ಅಧ್ಯಕ್ಷರು, ಎನ್.ಎ.ಪಿ.ಸಿ., ಚೆನ್ನೈ. |
| 2. ನಿಂಗರಾಜು, ವಯಸ್ಸು 26 ವರ್ಷ, | | 2) ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ. 6ನೇ ಫ್ಲೋರ್, ಹರ್ಶದ್‌ಜಿ ಟಾಟಾ ರಸ್ತೆ, ಚರ್ಚ್‌ಗೇಟ್, ಮುಂಬೈ. |
| 3. ಮತೀಹ ನಾಯಕ್, 22 ವರ್ಷ, | | |
| 4. ಚಂದ್ರಶೇಖರ್ ನಾಯಕ್, 20 ವರ್ಷ, ವಿಳಾಸ: ಅಂಕನಬಾವಿ ಗ್ರಾಮ, ಮುದ್ದನಹಳ್ಳಿ ಪೋಸ್ಟ್, ಸಿ.ಎನ್. ಹಳ್ಳಿ ತಾಲ್ಲೂಕು, ತುಮಕೂರು ಜಿಲ್ಲೆ. | | |

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ರೂಪಲಿಬಾಯಿ ಇವರು ತಮ್ಮ ಯಜಮಾನರಾದ ಶಾಮಾನಾಯಕ್ ಇವರು ಪ್ರತಿವಾದಿ 1 ಇವರ ಕಂಪನಿಯಲ್ಲಿ ಕಾರ್ಮಿಕನಾಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 18.4.2002 ರಂದು ಉದ್ಯೋಗ ಸಮಯದಲ್ಲಿ ಜಿಲೆಟಿನ್ ಸ್ಪೋಟಗೊಂಡು ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್. 1294

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್:61.2003, ದಿನಾಂಕ: 13ನೇ ನವೆಂಬರ್ 2003**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

ಅರ್ಜಿದಾರರು:

1) ರಂಗಸ್ವಾಮಿ ಬಿನ್ ರಂಗಪ್ಪಾ, 48 ವರ್ಷ,
2) ಗೋವಿಂದಮ್ಮ ಕೋಂ ರಂಗಸ್ವಾಮಿ, 45 ವರ್ಷ,
3) ಭಾಗ್ಯಮ್ಮ ಮಗಳು ರಂಗಸ್ವಾಮಿ, 23 ವರ್ಷ,
ವಾಸ: ಗೌಡನ ಕುಂಟೆ, ತಮ್ಮಾಡಿಹಳ್ಳಿ ಪೋಸ್ಟ್,
ಮಡಕಶಿರಾ ತಾಲ್ಲೂಕು, ಅನಂತಪುರ ಜಿಲ್ಲೆ,
ಆಂಧ್ರಪ್ರದೇಶ ರಾಜ್ಯ.

ಪ್ರತಿವಾದಿಗಳು:

1) ಅಬ್ದುಲ್ ಸುಬಾನ್ ಬಿನ್ ಅಬ್ದುಲ್ ರಹೀಮ್
ಎಸ್.ಎಂ. ಸ್ಟೀಲ್ ಟ್ರೇಡರ್ಸ್, ಬಾಳಿನಕಟ್ಟೆ,
ತುಮಕೂರು.
2) ದಿ ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂ.ಲಿ.
ಟಿ.ಜಿ.ಎಂ.ಎ. ಬಿಲ್ಡಿಂಗ್, 1ನೇ ಫ್ಲೋರ್,
ಜೆ.ಸಿ.ರಸ್ತೆ, ತುಮಕೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀ ರಂಗಸ್ವಾಮಿ ಹಾಗೂ ಗೋವಿಂದಮ್ಮ ಇವರು ತಮ್ಮ ಮಗ ಹರೀಶ್ ಇವರು ಪ್ರತಿವಾದಿ ಅಬ್ದುಲ್ ಸುಬಾನ್ ಇವರ ಲಾರಿ ಸಂಖ್ಯೆ: ಕೆಎ-06-ಡಿ-2588 ವಾಹನದಲ್ಲಿ ಕ್ಲೀನರ್ ಆಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 28.5.2003 ರಂದು ಉದ್ಯೋಗ ಸಮಯದಲ್ಲಿ ವಿ. ಕೋಡಿಹಳ್ಳಿ ಹತ್ತಿರ ಗೋವಿಂದಯ್ಯ ಅನ್ನುವವರ ಜಮೀನಿನ ಹತ್ತಿರ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್. 1295

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್:65/2003, ದಿನಾಂಕ: 13ನೇ ನವೆಂಬರ್ 2003**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

ಅರ್ಜಿದಾರರು:

1) ಶ್ರೀಮತಿ ಭಾಗ್ಯಮ್ಮ ಕೋಂ ಲೇಟ್ ಗುರುಲಿಂಗಯ್ಯ,
ವಯಸ್ಸು 25 ವರ್ಷ,
2) ಕು. ಗಿರಿಜಾಂಬಾ ಮಗಳು ಲೇಟ್ ಗುರುಲಿಂಗಯ್ಯ,
ವಯಸ್ಸು 7 ವರ್ಷ,
3) ಮಿ: ಕಾರ್ತಿಕ್ ಬಿನ್ ಲೇಟ್ ಗುರುಲಿಂಗಯ್ಯ,
ವಯಸ್ಸು 05 ವರ್ಷ,
4) ಹನುಮಕ್ಕ ಕೋಂ ಲೇಟ್ ಲಿಂಗೇಗೌಡ, ವಯಸ್ಸು 51 ವರ್ಷ,
5) ಶ್ರೀಮತಿ ತಿಪ್ಪಮ್ಮ ಲಿಂಗೇಗೌಡರವರ ಮಗಳು,
ಎಲ್ಲರ ವಾಸ: ಬಿದಕೆರೆ ಗ್ರಾಮ, ಮಧುಗಿರಿ ತಾ:,
ತುಮಕೂರು ಜಿಲ್ಲೆ.

ಪ್ರತಿವಾದಿಗಳು:

1) ಎನ್. ಮಂಜುನಾಥ ಬಿನ್ ನಾರಾಯಣಪ್ಪ,
ವಾಸ: ದೊಡಮರಹಳ್ಳಿ ಗ್ರಾಮ, ಚಿಕ್ಕಬಳ್ಳಾಪುರ
ತಾಲ್ಲೂಕು, ಕೋಲಾರ ಜಿಲ್ಲೆ.
2) ದಿ ಬ್ರಾಂಚ್ ಮ್ಯಾನೇಜರ್,
ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂ. ಲಿ.
ನಂ.20, ಜಾಲಹಳ್ಳಿ ಕ್ರಾಸ್, ಚೊಕ್ಕಸಂದ್ರ,
ಬೆಂಗಳೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಭಾಗ್ಯಮ್ಮ ಇವರು ತಮ್ಮ ಯಜಮಾನರಾದ ಗುರುಲಿಂಗಯ್ಯ ಇವರು ಪ್ರತಿವಾದಿ ಎನ್.ಮಂಜುನಾಥ ಇವರ ಟೆಂಪೋ ಸಂಖ್ಯೆ: ಕೆಎ 40/2619 ವಾಹನದಲ್ಲಿ ಚಾಲಕನಾಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 28.7.2003 ರಂದು ಉದ್ಯೋಗ ಸಮಯದಲ್ಲಿ ಶಮ್‌ಶಾಬಾದ್, ಪಿಸಿಡಿ ಕಂಪನಿ ಹತ್ತಿರ ನಿಲ್ಲಿಸಿದಾಗ ಲಾರಿ ಸಂಖ್ಯೆ: ಎಎಎಲ್ 1465 ವಾಹನವು ಡಿಕ್ಕಿ ಹೊಡೆದು ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್. 1296

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್:76/2003, ದಿನಾಂಕ: 13ನೇ ನವೆಂಬರ್ 2003**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1) ರೇಖ್ಯಾ ನಾಯಕ್ ಬಿನ್ ರೂಪಲಾ ನಾಯಕ್, 60 ವರ್ಷ, | | 1) ಎಸ್. ರೋಶನ್ ಜಮೀರ್ ಬಿನ್ ಶೆಶಾವಲಿ, ಡೋರ್ ನಂ.8 ಡಬ್ಲ್ಯೂ ನಂ.6, ಮಹಮ್ಮದ್ ಯೂಸೂಫ್‌ಸಾಬ್ ಸ್ಟ್ರೀಟ್, ಬಳ್ಳಾರಿ. |
| 2) ಸೀತಾಬಾಯಿ ಕೋಂ ರೇಖ್ಯಾನಾಯಕ್, 55 ವರ್ಷ ವಾಸ: ಅನುಪನಹಳ್ಳಿ ತಾಂಡಾ, ಶಿರಾ ತಾಲ್ಲೂಕು. | | 2) ದಿ ಡಿವಿಜನಲ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್‌ಶ್ಯೂರೆನ್ಸ್ ಕಂ. ಲಿ., ರಾಮಕೃಷ್ಣ ಕಾಂಪ್ಲೆಕ್ಸ್, ರಾಘವಚಾರಿ ರಸ್ತೆ, ಬಳ್ಳಾರಿ. |

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ರೇಖ್ಯಾನಾಯಕ ಹಾಗೂ ಸೀತಾಬಾಯಿ ಇವರು ತಮ್ಮ ಮಗಳು ರೇಣುಕಾಬಾಯಿ ಇವರು ಪ್ರತಿವಾದಿ ಎಸ್. ರೋಶನ್ ಜಮೀರ್ ಇವರ ವಾಹನ ಸಂಖ್ಯೆ: ಎಪಿ-05-ಯು-2609 ವಾಹನದಲ್ಲಿ, ಕೂಲಿ ಆಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 28.04.2003 ರಂದು ಉದ್ಯೋಗ ಸಮಯದಲ್ಲಿ ಮಧುಗಿರಿ-ಶಿರಾ-ರಸ್ತೆ ನ್ಯಾಯಗೆರೆ ಗೇಟ್, ರಾಜಣ್ಣನವರ ಜಮೀನಿನ ಹತ್ತಿರ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್. 1297

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್:80/2003, ದಿನಾಂಕ: 13ನೇ ನವೆಂಬರ್ 2003**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1) ಸೌಭಾಗ್ಯಮ್ಮ ಕೋಂ ಕುಮಾರ್ ನಾಯಕ್, 25 ವರ್ಷ, 2) ಥಾವರಾ ನಾಯಕ್, ಪ್ರಾಪ್ತರು, 3) ಮಂಜುನಾಥ, 3 ವರ್ಷ, | | 1) ಮಣಿಯನ್, ಅಧ್ಯಕ್ಷರು, ಎನ್‌ಎಪಿಸಿ, ಕಂಪನಿ, ನಂ.480, ಅಣ್ಣಸಲೈ, ನಂದಹಾಮ್, ಚೆನ್ನೈ-035 |
| 4) ಪವಿತ್ರಬಾಯಿ, 2 ವರ್ಷ, ಎಲ್ಲರ ವಾಸ: ದೊಡ್ಡಬಿದರೆ ಗ್ರಾಮ, ಹುಳಿಯಾರ್ ಹೋಬಳಿ, ಸಿ.ಎನ್. ಹಳ್ಳಿ ತಾಲ್ಲೂಕು, ತುಮಕೂರು ಜಿಲ್ಲೆ. | | 2) ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ., 6ನೇ ಫ್ಲೋರ್ ಹರ್ಶದ್‌ಜಿ ಟಾಟಾ ರೋಡ್, ಚರ್ಚ್‌ಗೇಟ್, ಮುಂಬೈ. |

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಸೌಭಾಗ್ಯಮ್ಮ ಇವರು ತಮ್ಮ ಯಜಮಾನರಾದ ಕುಮಾರ ನಾಯಕ್ ಇವರು ಪ್ರತಿವಾದಿ-1 ಇವರ ಕಂಪನಿಯಲ್ಲಿ ಕಾಮಿಕನಾಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 18.04.2002 ರಂದು ಉದ್ಯೋಗ ಸಮಯದಲ್ಲಿ ಅಂಕನಭಾವಿ ಸಮೀಪ, ಜಿಲೆಟಿನ್ ಸ್ಫೋಟಗೊಂಡು ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್. 1298

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ:258:ಡಿಟಿಸಿಆರ್:1998-1999, ದಿನಾಂಕ: 20ನೇ ನವೆಂಬರ್ 2003**

**ಉಪಸ್ಥಿತರು:** ಗೋವಿಂದಪ್ಪ
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದ.ಕ.ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**
ಪೊಲೀಸ್ ಉಪ ನಿರೀಕ್ಷಕರು,
ಉಳ್ಳಾಲ ಪೊಲೀಸ್ ಠಾಣೆ,
ಉಳ್ಳಾಲ.

**ವಿರುದ್ಧ**

**ಆರೋಪಿಗಳು:**
1) ಅಂತೋಣಿ ಕೆ. ಕ್ಲೇವಿಯರ್ (32 ವರ್ಷ) ಬಿನ್ ಕ್ಲೇವಿಯರ್ ಕಡುಮಗಲ್, ಉಳಿಕ್ಕಲ್ ಪೋಸ್ಟ್, ಪಾಡಿಯೂರ್, ಕಲ್ಲಿಯಾದ್, ತಾಲಿಪರಂಬ ತಾಲ್ಲೂಕು, ಕೇರಳ ರಾಜ್ಯ.
2) ಸೋನಿ, (ಪ್ರಾಯ: 22), ಬಿನ್ ಥೋಮಸ್, ಉಳಿಕ್ಕಲ್ ಪೋಸ್ಟ್, ಪೆಟ್ಟಿಕಾಟ್ ಹೌಸ್, ಕಲ್ಲಿಯಾದ್, ತಾಲಿಪರಂಬ, ಕಣ್ಣೂರು ಜಿಲ್ಲೆ, ಕೇರಳ ರಾಜ್ಯ.

**ವಾಹನ ಮಾಲೀಕರು:**
ಅಂತೋಣಿ ಕೆ. ಕ್ಲೇವಿಯರ್ (32 ವರ್ಷ), ಬಿನ್ ಕ್ಲೇವಿಯರ್ ಕಡುವುಂಗಲ್ ಮನೆ, ಉಳಿಕ್ಕಲ್ ಪೋಸ್ಟ್, ಪಡಿಯೂರ್ ಗ್ರಾಮ, ತಾಲಿಪರಂಬ ತಾಲ್ಲೂಕು, ಕೇರಳ ರಾಜ್ಯ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 31.08.1998 ರಂದು ಉಳ್ಳಾಲ ಪೊಲೀಸು ಠಾಣೆಯ ಹೆಡ್‌ಕಾನ್ಸ್‌ಟೇಬಲ್ ದಯಾನಂದ ನಾಯಕ್ ಇವರು ಠಾಣೆಯ ಪಿ.ಸಿ.115 ಇವರೊಂದಿಗೆ ಹಾಗೂ ರಾತ್ರಿ ಗಸ್ತಿನ ಸಿಬ್ಬಂದಿಗಳಾದ ಪಿ.ಸಿ.1949 ಮತ್ತು 1380 ಇವರೊಂದಿಗೆ ಇಲಾಖೆಯ ಜೀಪಿನಲ್ಲಿ ಗಸ್ತು ತಿರುಗುತ್ತಿದ್ದಾಗ 5.15ರ ಸಮಯ ತೊಕ್ಕೊಟ್ಟು ಜಂಕ್ಷನ್‌ನಲ್ಲಿ ವಾಹನ ತಪಾಸಣೆ ಮಾಡುತ್ತಿರುವಾಗ ಮಂಗಳೂರಿನಿಂದ ಕೇರಳದ ಕಡೆಗೆ ರಾಷ್ಟ್ರೀಯ ಹೆದ್ದಾರಿಯಲ್ಲಿ ಕೆಎಲ್-13ಎ-1253 ಸಂಖ್ಯೆಯ ಬಿಳಿ ಬಣ್ಣದ ಕಾರು ವೇಗವಾಗಿ ಬರುತ್ತಿದ್ದು ನಿಲ್ಲಿಸಲು ಸೂಚನೆ ನೀಡಿದಾಗ ಅದು ನಿಲ್ಲದೇ ವೇಗವಾಗಿ ಹೋಗಲು ಅದನ್ನು ಬೆನ್ನಟ್ಟಿ ತಲಪಾಡಿ ಕೆ.ಸಿ. ರೋಡ್ ಎಂಬಲ್ಲಿ ಅಡ್ಡಹಾಕಿ ನಿಲ್ಲಿಸಿ ಕಾರನ್ನು ಪರಿಶೀಲಿಸಲು ಕಾರಿನ ಎದುರು ಸೀಟಿನಲ್ಲಿ ಚಾಲಕ ಮತ್ತು ಇನ್ನೊಬ್ಬ ವ್ಯಕ್ತಿಯು ಕುಳಿತಿದ್ದು ಅವರ ಮಧ್ಯ ಒಂದು ಬಿಳಿ ಬಣ್ಣದ ಪ್ಲಾಸ್ಟಿಕ್ ಚೀಲದ ಕಟ್ಟು ಇದ್ದು ಕಾರಿನ ಹಿಂಬದಿಯ ಸೀಟಿನಲ್ಲಿ 2 ಚೀಲದ ಕಟ್ಟುಗಳು ಹಾಗೂ ಕಾರಿನ ಡಿಕ್ಕಿಯಲ್ಲಿ 2 ಗೋಣಿ ಚೀಲದ ಕಟ್ಟುಗಳು ಒಟ್ಟು 5 ಗೋಣಿ ಚೀಲದ ಕಟ್ಟುಗಳು ಇದ್ದು ಅವುಗಳಲ್ಲಿ ಮೈಸೂರು ಶುಗರ್ ಕಂಪೆನಿ ಎಂದು ಮುದ್ರೆ ಇರುವ 100 ಮಿಲಿಯ ಸಾರಾಯಿ ತೊಟ್ಟೆಗಳು ಇರುವುದು ಕಂಡುಬಂತು. ಕಾರಿನ ಚಾಲಕನ ಹೆಸರು ವಿಳಾಸವನ್ನು ಕೇಳಲಾಗಿ ಆತನು ತನ್ನ ಹೆಸರು ಅಂತೋಣಿ ಕೆ. ಕ್ಲೇವಿಯರ್ ಬಿನ್ ಕ್ಲೇವಿಯರ್, ಕಡುವಾಂಗಲ್ ಮನೆ, ಉಳಿಕ್ಕಲ್ ಪೋಸ್ಟ್, ಕಲ್ಲಿಯಾದ್, ತಾಲಿಪರಂಬ ತಾಲ್ಲೂಕು, ಕೇರಳ ರಾಜ್ಯ ಎಂದೂ ಇನ್ನೊಬ್ಬ ವ್ಯಕ್ತಿಯು ತನ್ನ ಹೆಸರು ಸೋನಿ, ಬಿನ್ ಥೋಮಸ್, ಉಳಿಕ್ಕಲ್ ಪೋಸ್ಟ್, ಕಲ್ಲಿಯಾದ್, ತಾಲಿಪರಂಬ, ಕಣ್ಣೂರು ಜಿಲ್ಲೆ, ಎಂದು ತಿಳಿಸಿರುತ್ತಾರೆ. ಅವರಲ್ಲಿ ಸಾರಾಯಿ ಹೊಂದಲು ಪರವಾನಗಿ ಅಥವಾ ರಹದಾರಿ ಇದೆಯೇ ಎಂದು ವಿಚಾರ ಮಾಡಲು ಅವರಲ್ಲಿ ಯಾವುದೇ ರಹದಾರಿ ಇರುವುದಿಲ್ಲವೆಂದು ತಿಳಿಸಿರುತ್ತಾರೆ. ನಂತರ ಕಾರನ್ನು ಪರಿಶೀಲನೆ ಮಾಡಲು ಮುಂಭಾಗದ ಸೀಟಿನಲ್ಲಿ ಇದ್ದ ಗೋಣಿ ಚೀಲದಲ್ಲಿ 250 ಸಾರಾಯಿ ತೊಟ್ಟೆಗಳು ಕಾರಿನ ಹಿಂಭಾಗದ ಸೀಟಿನಲ್ಲಿ ಇದ್ದ 2 ಗೋಣಿ ಚೀಲದಲ್ಲಿ ಒಂದರಲ್ಲಿ 497 ಮತ್ತು ಎರಡನೇ ಚೀಲದಲ್ಲಿ 499 ಸಾರಾಯಿ ತೊಟ್ಟೆಗಳು ಕಾರಿನ ಡಿಕ್ಕಿಯಲ್ಲಿದ್ದ 2 ಗೋಣಿಕಟ್ಟಿನಲ್ಲಿ ತಲಾ 500 ಸಾರಾಯಿ ತೊಟ್ಟೆಗಳು ಹೀಗೆ ಒಟ್ಟಿಗೆ 2246 ತೊಟ್ಟೆಗಳು (224.800 ಲೀಟರು) ಗಳು ಇರುವುದು ಕಂಡುಬಂದಿರುತ್ತದೆ. ಒಟ್ಟು 5 ಗೋಣಿಚೀಲದ ಕಟ್ಟುಗಳಿಂದ ತಲಾ 100 ಮಿಲಿಯ ಒಂದು ತೊಟ್ಟೆಯಂತೆ 5 ತೊಟ್ಟೆಗಳನ್ನು ರಾಸಾಯನಿಕ ಪರೀಕ್ಷೆಗೆಂದು ಮಾದರಿ ತೆಗೆದು ಪ್ರತೀ ತೊಟ್ಟೆಗಳನ್ನು ಹಳೇ ಕಾಗದದಿಂದ ಸುತ್ತಿ ಬಟ್ಟೆಯಿಂದ ಹೊಲೆದು ಠಾಣೆಯ ಸೀಲಿನಿಂದ ಸೀಲು ಮಾಡಿ ತನ್ನ ಹಾಗೂ ಪಂಚರ ವಿಳಾಸ ಸಹಿವಿರುವ ಚೀಟಿಗಳನ್ನು ಅಂಟಿಸಿ ಅಕ್ರಮ ಸಾಗಣೆಕೆಗಾಗಿ ಉಪಯೋಗಿಸಿದ ಕಾರನ್ನು ಪರಿಶೀಲನೆ ಮಾಡಲಾಗಿ ಕಾರಿನ ಸಂಖ್ಯೆ: ಕೆಎಲ್-13ಎ-1253 ಆಗಿದ್ದು ಅದರ ಎಂಜಿನ್ ಸಂಖ್ಯೆ: 6ಇಡಿಂ76766 ಮತ್ತು ಚಾಸೀ ಸಂಖ್ಯೆ: III 660822 ಆಗಿರುತ್ತದೆ. ಆರೋಪಿಗಳನ್ನು ವಿಚಾರ ಮಾಡಲಾಗಿ 1ನೇ ಆರೋಪಿ ಅಂತೋಣಿ ಕೆ. ಕ್ಲೇವಿಯರ್ಸ್ ತಾನು ಕಾರಿನ ನೋಂದಣಿ ಮಾಲೀಕನೆಂದು ತಿಳಿಸಿ ತನ್ನ ಕಾರು ಚಾಲನಾ ಲೈಸನ್ಸ್ ವಿಮಾ ಪಾಲಿಸಿ ಹಾಗೂ ವಾಹನದ ಪರವಾನಗಿಯನ್ನು ಹಾಜರು ಪಡಿಸಿರುತ್ತಾರೆ. ನಂತರ ಅಕ್ರಮ ಸಾರಾಯಿಯನ್ನು ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿದ ಕಾರನ್ನು ಮತ್ತು ಹಾಜರುಪಡಿಸಿದ ದಾಖಲೆಗಳನ್ನು ಸ್ವಾಧೀನಪಡಿಸಿಕೊಂಡು ಅಪರಾಧಿಗಳನ್ನು ದಸ್ತಗಿರಿ ಮಾಡಿ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 33,34,38 (ಎ) ಮತ್ತು 43(ಎ)ರ ರೀತ್ಯಾ ಪ್ರಕರಣವನ್ನು ತಕ್ಷೀರು ಸಂಖ್ಯೆ: 140/98 ದಿನಾಂಕ: 31.8.98ರ ಮೂಲಕ ದಾಖಲು ಪಡಿಸಿ ವಶಪಡಿಸಿಕೊಂಡ ಸ್ವತ್ತುಗಳನ್ನು ಹಾಗೂ ದಾಖಲೆಗಳನ್ನು ಮುಂದಿನ ನಡವಳಿಕೆಯ ಬಗ್ಗೆ ಇಲಾಖೆಗೆ ಹಸ್ತಾಂತರಿಸಲು ಪ್ರಾಧಿಕಾರದಿಂದ ಅನುಮತಿ ಪಡೆದು ಪ್ರಕರಣವನ್ನು ಮುಂದಿನ ನಡವಳಿಕೆಗಾಗಿ ಅಬಕಾರಿ ನಿರೀಕ್ಷಕರು, ಉಳ್ಳಾಲ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ವಾಹನ ಮಾಲೀಕರು ದಿನಾಂಕ: 24.09.98 ರಂದು ವಾಹನವನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲು ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸಿದ್ದು ಪ್ರಾಧಿಕಾರವು ದಿನಾಂಕ: 19.12.98 ರಂದು ತಾತ್ಕಾಲಿಕ ಬಿಡುಗಡೆ ಕೋರಿ ಸಲ್ಲಿಸಿದ್ದ ಅರ್ಜಿಯನ್ನು ತಿರಸ್ಕರಿಸಿರುತ್ತದೆ. ಪ್ರಾಧಿಕಾರವು ತಾತ್ಕಾಲಿಕ ಬಿಡುಗಡೆಗೆ ತಿರಸ್ಕರಿಸಿದ ಆದೇಶದ ವಿರುದ್ಧ ಅರ್ಜಿದಾರರು ಜಿಲ್ಲಾ ಸತ್ರ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಿದ್ದು

ಮಾನ್ಯ ಜಿಲ್ಲಾ ಸತ್ರ ನ್ಯಾಯಾಲಯವು ಕ್ರಿಮಿನಲ್ ಅಪೀಲು ಸಂಖ್ಯೆ: 6/1999 ರಂತೆ ರೂ.1 ಲಕ್ಷ ರೂ.ಗಳ ಇಂಡೆಮ್ನಿಟಿ ಬಾಂಡ್ ಮತ್ತು ಶ್ಯೂರಿಟಿಯನ್ನು ಪಡೆದು ವಾಹನವನ್ನು ಬಿಡುಗಡೆ ಮಾಡಲು ನೀಡಿದ ಆದೇಶದನ್ವಯ ಪ್ರಾಧಿಕಾರವು 22.7.99 ರಂದು ವಾಹನವನ್ನು ತಾತ್ಕಾಲಿಕವಾಗಿ ಬಿಡುಗಡೆ ಮಾಡಿರುತ್ತದೆ. ಈ ಪ್ರಾಧಿಕಾರವು ದಿನಾಂಕ: 21.2.2000 ರಂದು ಕಾರಣ ಕೇಳಿ ನೋಟೀಸನ್ನು ನೀಡಿದ್ದು ಸದ್ರಿ ಕಾರಣ ಕೇಳಿ ನೀಡಿದ್ದ ನೋಟೀಸಿಗೆ ಉತ್ತರ ನೀಡಿರುವುದಿಲ್ಲ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ ಸರ್ಕಾರದ ಅಭಿಯೋಜನೆಯ ಪರ ಮೂರು ಸಾಕ್ಷಿಗಳನ್ನು ಮತ್ತು ವಾಹನ ಮಾಲೀಕರ ಪರ ಒಂದು ಸಾಕ್ಷಿಯನ್ನು ವಿಚಾರಣೆಗೆ ಒಳಪಡಿಸಿ ಅವರುಗಳ ಹೇಳಿಕೆಯನ್ನು ಪಡೆಯಲಾಗಿದೆ. ಈ ಪ್ರಕರಣದಲ್ಲಿ ಸರ್ಕಾರದ ಪರ ಹಾಗೂ ವಾಹನ ಮಾಲೀಕರ ಪರ ಒದಗಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತವೆ.

1) ದಿನಾಂಕ: 31.8.98 ರಂದು ವಾಹನ ಅಂಬಾಸಿಡರ್ ಕಾರು ಸಂಖ್ಯೆ: ಕೆಎಲ್-13-ಎ-1253 ರಲ್ಲಿ ಅಕ್ರಮವಾಗಿ ಸಾರಾಯಿ ಸಾಗಣೆ ಮಾಡಲಾಗಿತ್ತೇ?

2) ವಾಹನ ಮಾಲೀಕರು ವಾಹನದಲ್ಲಿ ತನಗೆ ತಿಳಿಯದೇ ಅಕ್ರಮ ಸಾರಾಯಿ ಸಾಗಾಣೆಗೆ ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಸಾಬೀತುಪಡಿಸಿದ್ದಾರೆಯೇ?

3) ಜಪ್ತುಪಡಿಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯಾಧಾರಗಳ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದೂ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಇಲ್ಲ ಎಂದೂ ಮೂರನೇ ಅಂಶವನ್ನು ಕೊನೆಯ ಆದೇಶದಂತೆ.

**ಪ್ರಾ.ಸಾ.-1:**

ಕೆ. ದಯಾನಂದ ನಾಯಕ್, ಮುಖ್ಯ ಆರಕ್ಷಕರು, ಉಳ್ಳಾಲ ಆರಕ್ಷಕ ಠಾಣೆ ಇವರು ದಿನಾಂಕ: 24.5.01 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ಹೇಳಿಕೆಯನ್ನು ನೀಡಿರುತ್ತಾರೆ. ದಿನಾಂಕ: 31.8.98 ರಂದು ಆರಕ್ಷಕ ನಿರೀಕ್ಷಕರ ಆದೇಶದಂತೆ ಕಳ್ಳತನದ ಬಗ್ಗೆ ಗಸ್ತು ಕಾರ್ಯನಿರ್ವಹಿಸುತ್ತಿರುವಾಗ ರಾತ್ರಿ ಗಸ್ತಿನ ಪಿ.ಸಿ.1949 ಮತ್ತು 1580 ರೊಂದಿಗೆ ಸುಮಾರು 5.10ರ ಸಮಯ ತೊಕ್ಕೊಟ್ಟು ಜಂಕ್ಷನ್‌ನಲ್ಲಿ ವಾಹನಗಳ ತಪಾಸಣೆ ಮಾಡುತ್ತಿರುವಾಗ ಅತೀ ವೇಗದಲ್ಲಿ ಮಂಗಳೂರು ಕಡೆಯಿಂದ ಕಾಸರಗೋಡು ಕಡೆಗೆ ಬರುತ್ತಿದ್ದ ಕಾರನ್ನು ನಿಲ್ಲಿಸಲು ಸೂಚಿಸಿದಾಗ ನಿಲ್ಲಿಸದೇ ವೇಗವಾಗಿ ಚಲಾಯಿಸಲಾಗಿ ಇಲಾಖೆಯ ವಾಹನದಲ್ಲಿ ಬೆನ್ನಟ್ಟಿ ತಲಪಾಡಿ ಕೆ.ಸಿ.ರೋಡ್ ಜಂಕ್ಷನ್‌ನಲ್ಲಿ ನಿಲ್ಲಿಸಿ ವಿಚಾರ ಮಾಡಲು ಕಾರು ಸಂಖ್ಯೆ: ಕೆಎಲ್-13-ಎ-1253 ಅಂಬಾಸಿಡರ್ ಕಾರು ಆಗಿದ್ದು ಎದುರು ಸೀಟಿನಲ್ಲಿ ಇಬ್ಬರು ವ್ಯಕ್ತಿಗಳಿದ್ದು ಅವರಲ್ಲಿ ಕಾರು ಚಾಲಕನ ಹೆಸರು ಅಂತೋನಿ ಕೆ. ಕ್ಸೇವಿಯರ್ ಬಿನ್ ಕ್ಸೇವಿಯರ್ ಎಂದೂ ಇನ್ನೊಬ್ಬನ ಹೆಸರು ಸೋನಿ, ಎಂದು ತಿಳಿದು ಬಂದಿರುತ್ತದೆ. ಕಾರನ್ನು ಪರಿಶೀಲಿಸಲಾಗಿ ಕಾರಿನಲ್ಲಿ ಮುಂಭಾಗದ ಸೀಟಿನಲ್ಲಿ ಒಂದು ಗೋಣಿ ಚೀಲದ ಕಟ್ಟು, ಹಿಂಭಾಗದ ಸೀಟಿನಲ್ಲಿ 2 ಗೋಣಿ ಚೀಲದ ಕಟ್ಟು, ಕಾರಿನ ಡಿಕ್ಕಿಯಲ್ಲಿ 2 ಗೋಣಿ ಚೀಲದ ಕಟ್ಟುಗಳು ಇದ್ದು, ಈ ಬಗ್ಗೆ ಚಾಲಕನನ್ನು ವಿಚಾರಿಸಲಾಗಿ ಇವುಗಳು ಸಾರಾಯಿ ತೊಟ್ಟೆಗಳು ಎಂದು, ಈ ಬಗ್ಗೆ ಪರವಾನಗಿ ಇದೆಯೇ ಎಂದು ಕೇಳಲು ಇರುವುದಿಲ್ಲವೆಂದು ತಿಳಿಸಿದ್ದು ಎದುರು ಸೀಟಿನಲ್ಲಿ ಇದ್ದ ಗೋಣಿಚೀಲ ಬಿಚ್ಚಿ ನೋಡಲಾಗಿ ಅದರಲ್ಲಿ ಮೈಸೂರು ಶುಗರ್ ಕಂಪನಿ ಎಂದು ಮುದ್ರಿತವಾದ ಒಟ್ಟು 100 ಮಿಲಿಯ 250 ಸಾರಾಯಿ ತೊಟ್ಟೆಗಳು, ಹಿಂಬದಿಯ 2 ಗೋಣಿಗಳಲ್ಲಿ 497 ಮತ್ತು 499 ತೊಟ್ಟೆಗಳು, ಡಿಕ್ಕಿಯಲ್ಲಿದ್ದ 2 ಗೋಣಿ ಚೀಲದಲ್ಲಿ ತಲಾ 500 ಸಾರಾಯಿ ತೊಟ್ಟೆಗಳು ಇರುವುದು ಕಂಡುಬಂದಿರುತ್ತದೆ. ಸ್ಥಳದಲ್ಲಿಯೇ ಬಸ್ಸಿಗಾಗಿ ಕಾಯುತ್ತಿದ್ದ ಇಬ್ಬರು ವ್ಯಕ್ತಿಗಳನ್ನು ಪಂಚರನ್ನಾಗಿಸಿಕೊಂಡು ಅವರ ಸಮಕ್ಷಮ ವಾಹನವನ್ನು ಪರಿಶೀಲಿಸಿ ರಾಸಾಯನಿಕ ಪರೀಕ್ಷೆಗಾಗಿ ಮಾದರಿಗಳನ್ನು ತೆಗೆದು ಅವುಗಳನ್ನು ಹಳೇ ಪೇಪರಿನಿಂದ ಸುತ್ತಿ ಬಿಳಿ ಬಟ್ಟೆಯಿಂದ ಕಟ್ಟಿ ಎಸ್.ಎಚ್.ಓ. ಸೀಲಿನಿಂದ ಸೀಲು ಮಾಡಿ ತನ್ನ ಸಹಿ ಮತ್ತು ಆರೋಪಿಗಳ ಹೆಸರು ವಿಳಾಸವಿರುವ ಚೀಟಿಗಳನ್ನು ಮಾದರಿ ಸೀಸೆಗಳ ಮೇಲೆ ಅಂಟಿಸಲಾಯಿತು ಮತ್ತು ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿ ವಾಹನ ಮತ್ತು ಸಾರಾಯಿಯನ್ನು ಮತ್ತು ಸ್ಟಿರಿಯೋವನ್ನು ವಶಕ್ಕೆ ತೆಗೆದುಕೊಂಡಿರುತ್ತೇನೆ. ಮಹಜರು ಪ್ರತಿಯನ್ನು ನೋಡಿದ್ದು ಅದನ್ನು ನಿಶಾನೆ ಪಿ-1 ಎಂದು ಅದರ ಮೇಲೆ ತನ್ನ ಸಹಿಯನ್ನು ನಿಶಾನೆ ಪಿ-1ಎ ಎಂದು ಗುರುತಿಸಲಾಯಿತು, ನಂತರ ಆರೋಪಿಗಳನ್ನು ಮತ್ತು ಸ್ವತ್ತುಗಳನ್ನು ವರದಿಯೊಂದಿಗೆ ಆರಕ್ಷಕ ಉಪ ನಿರೀಕ್ಷಕರಿಗೆ ಒಪ್ಪಿಸಿರುತ್ತೇನೆ. ಸದ್ರಿ ವರದಿಯನ್ನು ನೋಡಿದ್ದು ಅದನ್ನು ನಿಶಾನೆ ಪಿ-2 ಎಂದು, ಅದರಲ್ಲಿನ ಸಹಿಯನ್ನು ನಿಶಾನೆ ಪಿ-2ಎ ಎಂದು ಗುರುತಿಸಲಾಗಿರುತ್ತದೆ.

ಅರ್ಜಿದಾರರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ತಾನು ಮೆಜಿಸ್ಟ್ರೇಟ್ ಕೋರ್ಟಿನಲ್ಲಿ ಸಾಕ್ಷಿ ನುಡಿದಿದ್ದು ಜ್ಞಾಪಕವಿಲ್ಲ. ಸ್ಥಳದಲ್ಲಿ ಬಸ್ಸಿಗಾಗಿ ಕಾಯುತ್ತಿದ್ದ ವ್ಯಕ್ತಿಗಳನ್ನು ಪಂಚರನ್ನಾಗಿ ತೆಗೆದುಕೊಂಡಿರುವುದಾಗಿ ತಿಳಿಸಿರುತ್ತಾರೆ. ಸದ್ರಿ ವ್ಯಕ್ತಿಗಳ ವಿಳಾಸ ತನಗೆ ಜ್ಞಾಪಕವಿಲ್ಲ. ತಕ್ಷೀರು ಸ್ಥಳದ ಸುತ್ತಮುತ್ತ ಮನೆಗಳಿವೆ. ಸದ್ರಿ ಮನೆಯವರನ್ನು ಕರೆದು ಪಂಚರನ್ನಾಗಿ ಮಾಡುವ ಪ್ರಯತ್ನವನ್ನು ಮಾಡಿಲ್ಲವೆಂದು ತಿಳಿಸಿರುತ್ತಾರೆ. ಪ್ರತಿಯೊಂದು ಸಾರಾಯಿ ತೊಟ್ಟೆಗಳನ್ನು ಮೂಸಿ ನೋಡಲಾಗಿ ಸಾರಾಯಿ ವಾಸನೆ ಬರುತ್ತಿತ್ತು ಎಂದು ಕೆಲವು ತೊಟ್ಟೆಗಳು ಲೀಕ್ ಆಗಿದ್ದವು ಎಂದು ತಿಳಿಸಿರುತ್ತಾನೆ. ಸಾರಾಯಿ ತೊಟ್ಟೆಗಳನ್ನು ಕೊಂಡ್ಯೊಯುವ ಕೆಲಸ ಸೋನಿಯಾದಾಗಿದ್ದು ತನಗೆ ವಾಹನದ ಇಂಜಿನ್ ನಂಬರು ಜ್ಞಾಪಕವಿಲ್ಲ. ಕೆ.ಸಿ. ರೋಡಿನಿಂದ ಚೆಕ್‌ಪೋಸ್ಟ್‌ಗೆ ಒಂದೂವರೆ ಫರ್ಲಾಂಗ್ ದೂರವಿರುತ್ತದೆ. ತೊಕೊಟ್ಟುವಿನಲ್ಲಿ ಪೊಲೀಸು ಚೆಕ್‌ಪೋಸ್ಟ್‌ನ್ನು ಸುಳ್ಳಾಗಿ ಸೃಷ್ಟಿ ಮಾಡಿದೆ ಎಂದರೆ ಸರಿಯಲ್ಲ. ಮತ್ತು ವಾಹನದಲ್ಲಿ 2246 ಸಾರಾಯಿ ತೊಟ್ಟೆಗಳು ಇರಲಿಲ್ಲವೆಂದರೆ ಸರಿಯಲ್ಲ ಎಂದು ತಿಳಿಸಿರುತ್ತಾರೆ. ಈ ಸಾಕ್ಷಿದಾರನು ಪಾಟೀ ಸವಾಲಿನಲ್ಲಿ ನೀಡಿರುವ ಹೇಳಿಕೆಗಳನ್ನು ಪರಿಶೀಲಿಸಲಾಗಿ ಮುಖ್ಯ ವಿಚಾರಣೆಯಲ್ಲಿ ನೀಡಿರುವ ಸಾಕ್ಷಿ ಹೇಳಿಕೆಗಳು ನಂಬಲು ಅರ್ಹವಾಗಿದ್ದು ನಂಬಲೇ ಬೇಕಾಗಿರುತ್ತದೆ. ಹಾಗೂ ಮುಖ್ಯ ವಿಚಾರಣೆಗೆ ಪೂರಕವಾಗಿರುತ್ತವೆ.

**ಪ್ರಾ.ಸಾ.-2:**

ಶ್ರೀ ಯಶವಂತ ಕುಮಾರ್, ನಿವೃತ್ತ ಅಬಕಾರಿ ನಿರೀಕ್ಷಕರು ದಿನಾಂಕ: 12.09.2002 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ಅವರು ದಿನಾಂಕ: 10.9.1998 ರಂದು ಈ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳು ಮತ್ತು ಸ್ವತ್ತುಗಳನ್ನು ಉಳ್ಳಾಲ ಆರಕ್ಷಕ ಉಪ ನಿರೀಕ್ಷಕರಿಂದ ಪಡೆದು ದಿನಾಂಕ: 18.9.98 ರಂದು ಈ ಪ್ರಕರಣಕ್ಕೆ ಸಂಬಂಧಿಸಿದ ಮಾದರಿ ಸಾರಾಯಿ ಸಾಚೆಟ್‌ಗಳನ್ನು ಮಾದರಿ ಸೀಲು ಮತ್ತು ಕೋರಿಕೆ ಪತ್ರದೊಂದಿಗೆ ಅಬಕಾರಿ ರಕ್ಷಕ ಶ್ರೀ ರಾಮ ಎಂಬುವರ ಕೈಯಲ್ಲಿ ರಾಸಾಯನಿಕ ತಜ್ಞರು ಮಂಗಳೂರು ಇವರಿಗೆ ಕಳುಹಿಸಿಕೊಟ್ಟಿದ್ದು ದಿನಾಂಕ: 13.10.98 ರಂದು ರಾಸಾಯನಿಕ ವರದಿ ಮತ್ತು ಪರೀಕ್ಷಿಸಲ್ಪಟ್ಟ ಸಾರಾಯಿ ಸ್ಯಾಚೆಟ್‌ಗಳನ್ನು ಪಡೆದಿರುವುದಾಗಿ ತಿಳಿಸಿರುತ್ತಾರೆ. ದಿನಾಂಕ: 2.8.98ರ ಪ್ರಕರಣದ ದಾಖಲೆ ಪತ್ರಗಳನ್ನು ಆರ್.ಸಿ. ಮಾಲೀಕರಿಗೆ ಹಿಂತಿರುಗಿಸಿ ದಿನಾಂಕ: 28.9.99 ರಂದು ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿರುವುದಾಗಿ ರಾಸಾಯನಿಕ ತಜ್ಞರ ಮೂಲ ಪ್ರತಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿದ್ದು ಅದರ ಪ್ರತಿಯನ್ನು ನೋಡಿದ್ದು ಅದನ್ನು ನಿಶಾನೆ ಪಿ-3ಎ ಎಂದು ಗುರುತಿಸಲಾಗಿದೆ.

ಸಾಕ್ಷಿದಾರರು ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ಸದ್ರಿ ಪ್ರಮಾಣ ಪತ್ರದಲ್ಲಿ ದೃಢೀಕರಣ ಇರುವುದಿಲ್ಲ, ಸ್ಯಾಚೆಟ್ ಮೇಲೆ ಆರೋಪಿಗಳ ಹೆಸರು ಮತ್ತು ಕ್ರೈಂ ನಂ ಬರೆದಿತ್ತು. ಸ್ಯಾಚೆಟ್‌ಗಳು ಪ್ರಾಧಿಕಾರದ ಮುಂದೆ ಇರುವುದಿಲ್ಲ. ಅಂತಿಮ ವರದಿ ಸಲ್ಲಿಸುವ ಮೊದಲು ಸ್ಯಾಚೆಟ್‌ಗಳು ಎಲ್ಲಿಂದ ಬಂದವು ಎಂಬ ಬಗ್ಗೆ ಯಾರನ್ನು ವಿಚಾರಿಸಿಲ್ಲ ಎಂದೂ ಈ ಪ್ರಕರಣದಲ್ಲಿ ಯಾವುದೇ ಪುರಾವೆಯಿಲ್ಲದಿದ್ದರೂ ನ್ಯಾಯಾಲಯಕ್ಕೆ ಅಂತಿಮ ವರದಿ ಸಲ್ಲಿಸಿರುತ್ತೇನೆಂದರೆ ಸರಿಯಲ್ಲ ನಿಶಾನೆ ಪಿ-3 ತಜ್ಞರ ವರದಿಯ ನಿಜ ಪ್ರತಿ ಅಲ್ಲ ಎಂದರೆ ಸರಿಯಲ್ಲ ಎಂದು ತಮ್ಮ ಹೇಳಿಕೆ ನೀಡಿರುತ್ತಾರೆ.

**ಪ್ರಾ.ಸಾ.-3:**

ಶ್ರೀ ರಾಮ ಯು. ಅಬಕಾರಿ ರಕ್ಷಕರು, ಉಳ್ಳಾಲ ವಲಯ ಇವರು ಈ ಪ್ರಾಧಿಕಾರದ ಮುಂದೆ ದಿನಾಂಕ: 12.9.2002 ರಂದು ಹಾಜರಾಗಿ ಸಾಕ್ಷಿ ನೀಡಿರುತ್ತಾರೆ. ದಿನಾಂಕ: 18.9.1998 ರಂದು ಈ ಪ್ರಕರಣಕ್ಕೆ ಸಂಬಂಧಿಸಿದ 5 ಸಾರಾಯಿ ಸ್ಯಾಚೆಟ್‌ಗಳನ್ನು ಅಬಕಾರಿ ನಿರೀಕ್ಷಕರಿಂದ ಪಡೆದು ರಾಸಾಯನಿಕ ತಜ್ಞರಿಗೆ ನೀಡಿರುತ್ತೇನೆ. ನಂತರ ದಿನಾಂಕ: 13.10.98 ರಂದು ಪರೀಕ್ಷಿಸಿದ ಸ್ಯಾಚೆಟುಗಳನ್ನು ತಜ್ಞರ ವರದಿಯನ್ನು ತಜ್ಞರಿಂದ ಪಡೆದು ಅಬಕಾರಿ ನಿರೀಕ್ಷಕರಿಗೆ ತಲುಪಿಸಿರುವುದಾಗಿ ಹೇಳಿಕೆ ನೀಡಿರುತ್ತಾರೆ. ಸಾಕ್ಷಿದಾರರು ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತ ಪ್ರತಿಯೊಂದು ಸ್ಯಾಚೆಟ್ ಮೇಲೆ ಬಟ್ಟೆ ಕವರ್ ಇದ್ದು ಅದರ ಮೇಲೆ 140 ಎಂದು ಬರೆದಿತ್ತು. ಒಳಗೆ ಏನಿತ್ತು ಎಂದು ನೋಡಲಿಲ್ಲ ತಜ್ಞರಿಂದ ಹಿಂದಕ್ಕೆ ತರುವಾಗ ಖಾಲಿ ತೊಟ್ಟೆಯಿತ್ತು ಎಂದು ಕೋರಿಕೆ ಪತ್ರದಲ್ಲಿ ನನ್ನ ಹೆಸರು ಇದ್ದು, ಸದ್ರಿ ಪತ್ರದಲ್ಲಿ ನಾನು ಸಹಿ ಮಾಡಿರುತ್ತೇನೆ ಎಂದು ತಿಳಿಸಿರುತ್ತಾರೆ. ನಾನು ಯಾವುದೇ ಮಾದರಿ ಸ್ಯಾಚೆಟ್‌ಗಳನ್ನು ರಾಸಾಯನಿಕ ತಜ್ಞರಿಗೆ ತೆಗೆದುಕೊಂಡು ಹೋಗಿದ್ದಾಗಲಿ ಮತ್ತು ಅವರಿಂದ ಹಿಂದಕ್ಕೆ ತೆಗೆದುಕೊಂಡು ಬಂದದ್ದಾಗಲಿ ಇಲ್ಲ ಎಂದರೆ ಸರಿಯಲ್ಲ ಎಂದು ತಿಳಿಸಿರುತ್ತಾರೆ ಮತ್ತು ರಾಸಾಯನಿಕ ತಜ್ಞರ ಪ್ರಕಾರ ಸಾರಾಯಿಯ ತೀಕ್ಷ್ಣತೆ $47^0$ ಯುಪಿ ಇದ್ದು ಇದು ಸಾರಾಯಿ ಎಂದು ದೃಢಪಟ್ಟಿರುತ್ತದೆ.

ಈ ಮೇಲಿನ ಸಾಕ್ಷ್ಯಾಧಾರಗಳಿಂದ, ಹಾಗೂ ಲಭ್ಯವಿರುವ ಹಾಗೂ ಹಾಜರುಪಡಿಸಿರುವ ದಾಖಲಾತಿಗಳಿಂದ ದಿನಾಂಕ: 31.8.98 ರಂದು ಅಂಬಾಸಿಡರ್ ಕಾರು ಸಂಖ್ಯೆ: ಕೆಎಲ್-13-ಎ-1253 ರಲ್ಲಿ ಅಕ್ರಮ ಸಾರಾಯಿ ಸಾಗಾಣಿಯಾಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಒಂದನೆಯ ವಿವಿಧಾಂಶವನ್ನು ಗುಣಾತ್ಮಕವಾಗಿ ಹೌದು ಎಂದು ಪರಿಗಣಿಸಿದ್ದೇನೆ.

**ಡಿ.ಡಬ್ಲ್ಯೂ.-1:**

ವಾಹನದ ಮಾಲೀಕರಾದ ಆಂಟೋನಿ ಕ್ಲೇವಿಯರ್, ಇವರು ವಾಹನ ಮಾಲೀಕರಾಗಿದ್ದು ದಿನಾಂಕ: 10.10.2002 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನೀಡಿರುತ್ತಾರೆ. ನಾನು ವಾಹನದ ಮಾಲೀಕ ಹಾಗೂ ಚಾಲಕನಾಗಿರುತ್ತೇನೆ. ನಾನು ಕೊಲ್ಲೂರಿನ ಮುಕಾಂಬಿಕಾ ಕ್ಷೇತ್ರಕ್ಕೆ ಬಾಡಿಗೆಗೆ ಹೋಗಿದ್ದೆ ಅವರನ್ನು ಅಲ್ಲಿ ಬಿಟ್ಟಾಗ ಸಾಯಂಕಾಲ 6.00 ಗಂಟೆಯಾಗಿತ್ತು. ಹಿಂದಕ್ಕೆ ಹೊರಟು ಕುಂದಾಪುರವನ್ನು 8 ಗಂಟೆಗೆ ತಲುಪಿ ಅಲ್ಲಿ ಕಾರನ್ನು ದುರಸ್ತಿಗೊಳಿಸಿ 10 ಗಂಟೆಗೆ ಹೊರಟೆನು. ಅಲ್ಲಿ ನನ್ನ ಗಾಡಿಗೆ ಒಬ್ಬ ಕಾಸರಗೋಡಿಗೆ ಹೋಗುವ ಒಬ್ಬ ಪ್ರಯಾಣಿಕ ಹತ್ತಿಕೊಂಡನು. ಅಲ್ಲಿಂದ ತೊಕ್ಕೊಟು ಮುಟ್ಟುವಾಗ 6,7 ಜನರು ಗಾಡಿಗೆ ಕೈ ತೋರಿಸಿದರು. ಅವರು ಸಾಮಾನ್ಯ ಬಗೆಯ ಬಟ್ಟೆ ತೊಟ್ಟಿದ್ದರಿಂದ ನಾನು ಗಾಡಿ ನಿಲ್ಲಿಸಲಿಲ್ಲ, ಮುಂದೆ ಹೋಗುವಾಗ ಫ್ಲಾಷ್ ಲೈಟ್ ಹಾಕಿ ಹಾರ್ನ್ ಹಾಕಿಕೊಂಡು ಬಂದಿದ್ದರಿಂದ ಗಾಡಿಯನ್ನು ನಿಲ್ಲಿಸಿದೆನು. ಆಗ ಸುಮಾರು 10 ಗಂಟೆಯಾಗಿತ್ತು. ಅವರು ಗಾಡಿಯನ್ನು ನಿಲ್ಲಿಸಲಿಲ್ಲ ಎಂದು ಪೆಟ್ಟುಹೊಡೆದು ನಂತರ ಕಾರಿನಲ್ಲಿ ಕುಳಿತು ಪೊಲೀಸ್ ಸ್ಟೇಷನ್ನಿಗೆ ಕರೆದುಕೊಂಡು ಹೋದರು. ನನ್ನ ಮೇಲೆ ಒಂದು ಸುಳ್ಳು ಕೇಸು ಹಾಕಿದರು, ನನ್ನ ಗಾಡಿಯಲ್ಲಿ ಸಾರಾಯಿ ಇರಲಿಲ್ಲ. ನನ್ನ ಮೇಲೆ ನ್ಯಾಯಾಲಯದಲ್ಲಿ ಕೇಸು ಇತ್ತು, ಅದು ಬಿಟ್ಟುಹೋಯಿತು ಎಂದು ನ್ಯಾಯಾಲಯದ ತೀರ್ಪಿನ ಪ್ರತಿಯನ್ನು ಹಾಜರುಪಡಿಸಿರುತ್ತಾರೆ. ಅದನ್ನು ನಿಶಾನೆ ಡಿ-1 ಎಂದು ಗುರುತಿಸಲಾಯಿತು.

ಎ.ಡಿ.ಪಿ.ಯವರ ಪಾಟೀ ಸವಾಲಿಗೆ ಉತ್ತರಿಸುತ್ತಾ ನನ್ನ ಕಾರನ್ನು ಕುಂದಾಪುರದಲ್ಲಿ ರಿಪೇರಿ ಮಾಡಿಸಲು 2 ಗಂಟೆ ಸಮಯ ಬೇಕಾಯಿತು. ಕುಂದಾಪುರದ ಗ್ಯಾರೇಜ್ ಬಳಿಯಿಂದ ಒಬ್ಬ ವ್ಯಕ್ತಿಯು ನನ್ನ ಕಾರಿನಲ್ಲಿ ಪ್ರಯಾಣಿಸಲೆಂದು ಕುಳಿತುಕೊಂಡನು. ಆತನ ಹೆಸರು ಸೋನಿ ಎಂದು ಆ ಸಮಯದಲ್ಲಿ ತುಂಬಿದ ಗೋಣಿ ಚೀಲವನ್ನು ಆ ವ್ಯಕ್ತಿ ಇಟ್ಟಿದ್ದ ಎಂದರೆ ಸರಿಯಲ್ಲ, ಮೊದಲು ಆ ವ್ಯಕ್ತಿಯ ಪರಿಚಯವಿರಲಿಲ್ಲ. ಕಾರನ್ನು ತೊಕೊಟ್ಟುವಿನ ಮುಂದೆ ಬ್ರಿಡ್ಜಿನ ಹತ್ತಿರ ಕಾರನ್ನು ನಿಲ್ಲಿಸಿದೆನು, ಪೊಲೀಸರು ತನ್ನನ್ನು ಯಾವ ಕಾರಣಕ್ಕಾಗಿ ಕರೆದುಕೊಂಡು ಹೋಗುತ್ತಾರೆ ಎಂದು ಕೇಳಿದೆನು. ಅವರು ಯಾವುದೆ ಕಾರಣವನ್ನು ಹೇಳಲಿಲ್ಲ. ಆ ದಿನ ನಾನು ಅಕ್ರಮ ಸಾರಾಯಿ ಗೋಣಿ ಚೀಲವನ್ನು ಸಾಗಣಿ ಮಾಡುತ್ತಿದ್ದೇನೆಂದು ಸೂಚಿಸಿದರೆ ಸರಿಯಲ್ಲ ಮತ್ತು ಈ ಪ್ರಾಧಿಕಾರದ ಮುಂದೆ ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆಂದರೆ ಸರಿಯಲ್ಲ ಎಂದು ತಿಳಿಸಿರುತ್ತಾರೆ.

ವಾಹನ ಮಾಲೀಕರು ತಮ್ಮ ತಿಳುವಳಿಕೆಗೆ ಬಾರದೇ ವಾಹನವನ್ನು ಅಕ್ರಮ ಸಾಗಣೆಗೆ ಬಳಸಿರುವುದನ್ನು ಸಾಬೀತುಪಡಿಸುವುದು ಅವರ ಆದ್ಯ ಕರ್ತವ್ಯವಾಗಿರುತ್ತದೆ. ಆದರೆ ವಾಹನ ಮಾಲೀಕರು ಈ ಪ್ರಾಧಿಕಾರದ ಮುಂದೆ ಸುಳ್ಳು ಹಾಗೂ ಕಟ್ಟುಕತೆಯನ್ನು ಹೇಳಿರುತ್ತಾರೆ ಎಂಬುದಕ್ಕೆ ಹಲವು ಕಾರಣಗಳಿವೆ. ಅಂದರೆ ಕೇರಳದಿಂದ ಕೊಲ್ಲೂರಿಗೆ ಹೋಗುವ ಪ್ರಯಾಣಿಕರನ್ನು ಕೊಲ್ಲೂರಿಗೆ ಇಳಿಸಿ ಖಾಲಿ ಗಾಡಿಯನ್ನು

ಹಿಂದಕ್ಕೆ ಕೊಂಡು ಹೋಗುವುದು ನಂಬಲು ಆಗದಂತಹ ಸಂಗತಿ. ಅಲ್ಲದೇ ಹಿಂದೆ ಬರುವಾಗ ಕುಂದಾಪುರದಲ್ಲಿ ತನ್ನ ಕಾರನ್ನು ರಿಪೇರಿ ಮಾಡಿಸಿಕೊಳ್ಳುವಾಗ ಒಬ್ಬ ವ್ಯಕ್ತಿಯು ಕಾಸರಗೋಡಿಗೆ ಹೋಗುವ ಮಲೆಯಾಳಿ ವ್ಯಕ್ತಿ ತನ್ನ ಕಾರಿಗೆ ಹತ್ತಿಕೊಂಡನೆಂದು, ಈ ಹಿಂದೆ ಆತನ ಪರಿಚಯವಿಲ್ಲವೆಂದು ತಿಳಿಸಿರುತ್ತಾರೆ. ಆದರೆ ಕಾರಿಗೆ ಹತ್ತಿಕೊಂಡಿರುವ ವ್ಯಕ್ತಿ ಸೋನಿ, ಬಿನ್ ಥೋಮಸ್, ಉಳಿಕಲ್ಲು ಪೋಸ್ಟ್, ಪಡಿಯಾರು ತಾಲಿಪರಂಬು, ಕಣ್ಣೂರು ಎಂದು ತಿಳಿಸಿದ್ದು ಆತನು ತನ್ನ ಊರಿನವನೇ ಆಗಿದ್ದು ಆತನ ಪರಿಚಯ ಈ ಹಿಂದೆ ಇರಲಿಲ್ಲವೆಂದು ಸುಳ್ಳು ಸಾಕ್ಷಿ ನೀಡಿರುತ್ತಾರೆ. ಈ ಕಾರಣದಿಂದ ತಾನು ಈ ಪ್ರಾಧಿಕಾರದ ಮುಂದೆ ಸುಳ್ಳು ಸಾಕ್ಷಿಯನ್ನು ನುಡಿದಿರುವುದು ನಂಬಲು ಅರ್ಹವಾದ ವಿಷಯವಾಗಿರುತ್ತದೆ. ಅಲ್ಲದೆ ಕೊಲ್ಲೂರಿನಿಂದ ಕೇರಳಕ್ಕೆ ಖಾಲಿ ಕಾರನ್ನು ಹಿಂದಕ್ಕೆ ತೆಗೆದುಕೊಂಡು ಹೋಗುವುದನ್ನು ಯಾರು ನಂಬುವುದಿಲ್ಲ. ಈತನು ಉದ್ದೇಶ ಪೂರ್ವಕವಾಗಿ ಮಂಗಳೂರಿನಿಂದ ಕೇರಳಕ್ಕೆ ಅಕ್ರಮ ಸಾರಾಯಿಯನ್ನು ಸಾಗಿಸುವ ಗುರಿಯನ್ನು ಇಟ್ಟುಕೊಂಡು ಅಕ್ರಮ ಸಾರಾಯಿಯನ್ನು ಸಾಗಣೆಮಾಡಿರುವುದು ಸಾಬೀತಾಗಿರುತ್ತದೆ. ತಾನು ಕಾರಿನ ಮಾಲೀಕರಾಗಿದ್ದು ತಾನೇ ಸ್ವತಃ ಅಕ್ರಮ ಸಾರಾಯಿ ಸಾಗಣೆಯಲ್ಲಿ ತೊಡಗಿದ್ದು ದಿನಾಂಕ: 31.8.98 ರಂದು ಬೆಳಿಗಿನ 5.30ಕ್ಕೆ ಉಳ್ಳಾಲ ಪೊಲೀಸಿನವರು ಸ್ಥಳ ಮಹಜರಿನೊಂದಿಗೆ ಅಕ್ರಮ ಸಾರಾಯಿಯನ್ನು ವಾಹನವನ್ನು ಜಪ್ತುಪಡಿಸಿರುವುದರಿಂದ ವಾಹನ ಮಾಲೀಕನು ಸ್ವತಃ ತಾನೇ ತನ್ನ ತಿಳುವಳಿಕೆಯಿಂದಲೇ ಈ ಕಾನೂನು ಬಾಹಿರ ಕೃತ್ಯವನ್ನು ಮಾಡಿರುತ್ತಾರೆ ಎಂದು ನಿಸ್ಸಂದೇಹವಾಗಿ ನಂಬಬಹುದಾಗಿದೆ. ಈ ಕಾರಣದಿಂದ ಎರಡನೇ ವಿವಿದಾಂಶಕ್ಕೆ ಉತ್ತರವನ್ನು ನಕಾರಾತ್ಮಕವಾಗಿ ಇಲ್ಲ ಎಂದು ಪರಿಗಣಿಸಿರುತ್ತೇನೆ.

ಈ ಎಲ್ಲಾ ಕಾರಣಗಳಿಂದ ಈ ಪ್ರಕರಣದಲ್ಲಿ ಜಪ್ತುಪಡಿಸಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ:258:ಡಿಟಿಸಿಆರ್:1998-1999, ದಿನಾಂಕ: 20ನೇ ನವೆಂಬರ್ 2003**

ಗೋವಿಂದಪ್ಪ ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43(ಎ)ರ ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಪೊಲೀಸು ಉಪ ನಿರೀಕ್ಷಕರು, ಉಳ್ಳಾಲ ಪೊಲೀಸು ಠಾಣೆ, ಉಳ್ಳಾಲ ಇವರು ದಾಖಲು ಮಾಡಿದ ಮೊಕದ್ದಮೆ ಸಂಖ್ಯೆ: 140/1998 ದಿನಾಂಕ: 31.08.1998 ರಲ್ಲಿ ಜಪ್ತುಪಡಿಸಲಾಗಿರುವ ವಾಹನ ಅಂಬಾಸಿಡರ್ ಕಾರು ಸಂಖ್ಯೆ: ಕೆಎಲ್-13-ಎ-1253ನ್ನು ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 20.11.2003 ರಂದು ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಗೋವಿಂದಪ್ಪ**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದ.ಕ. ಜಿಲ್ಲೆ, ಮಂಗಳೂರು.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ.:1 - ಶ್ರೀ ಕೆ. ದಯಾನಂದ ನಾಯಕ್, ಮುಖ್ಯ ಆರಕ್ಷಕರು, ಉಳ್ಳಾಲ ಪೊಲೀಸು ಠಾಣೆ, ಉಳ್ಳಾಲ.
ಪ್ರಾ.ಸಾ.:2 - ಶ್ರೀ ಯಶವಂತ ಕುಮಾರ್, ನಿವೃತ್ತ ಅಬಕಾರಿ ನಿರೀಕ್ಷಕರು, ಉಳ್ಳಾಲ ವಲಯ.
ಪ್ರಾ.ಸಾ.:3 - ಶ್ರೀ ಯು. ರಾಮ, ಅಬಕಾರಿ ರಕ್ಷಕ, ಉಳ್ಳಾಲ ವಲಯ.

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ-1 - ಮಹಜರು ಪ್ರತಿ
ನಿಶಾನೆ ಪಿ-1ಎ - ಅದರ ಮೇಲಿನ ಸಹಿ
ನಿಶಾನೆ ಪಿ-2 - ಆರೋಪಿಗಳ ಮತ್ತು ಸೊತ್ತುಗಳ ವರದಿ
ನಿಶಾನೆ ಪಿ-2ಎ - ಅದರ ಮೇಲಿನ ಸಹಿ
ನಿಶಾನೆ ಪಿ-3 - ರಾಸಾಯನಿಕ ವರದಿ ಪ್ರತಿ

**ಅನುಬಂಧ-3**

**ಫಿರ್ಯಾದುದಾರರ ಪರ ಅರ್ಜಿದಾರರು ಮಂಡಿಸಲಾದ ಸೊತ್ತುಗಳು:** ಇಲ್ಲಾ

**ಅನುಬಂಧ-4**

**ವಾಹನ ಮಾಲೀಕರ ಪರವಾಗಿ ಮಾಡಲಾದ ವಿಚಾರಣೆ ಮಾಡಿದ ಸಾಕ್ಷಿದಾರರು:**

ಡಿ.ಡಬ್ಲ್ಯ್ಯು-1 - ವಾಹನ ಮಾಲೀಕರು

**ಅನುಬಂಧ-5**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು:**

ನಿಶಾನೆ ಡಿ-1 - ಮಾನ್ಯ ಜೆ.ಎಂ.ಎಫ್.ಸಿ. 3ನೇ ನ್ಯಾಯಾಲಯದ ತೀರ್ಪು.

**ಗೋವಿಂದಪ್ಪ**
ಪಿ.ಆರ್. 1291
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದ.ಕ. ಜಿಲ್ಲೆ, ಮಂಗಳೂರು.

**ASST. COMMISSIONER OF COMML. TAXES, DIST. ADDL. CIRCLE-II, BANGALORE DVN., BANGALORE**

**TO WHOM SOEVER IT MAY CONCERN**

I Sri S.J. Harishkumar Malhotra, Assistant Commissioner of Commercial Taxes, Dist. Addl. Circle-II, Bangalore Division, Bangalore, do hereby declare that the 'C' Forms bearing Nos.L.017021 to L.017024 (Four numbers) as invalid. In case if any body traces them, the same may be returned to the undersigned. This is for the general public to note.

Bangalore
Date: 20-10-2003
P.R. 1292

**S.J. HARISHKUMAR MALHOTRA**
Asst. Commissioner of Comml. Taxes,
Dist. Addl. Circle-II, Bangalore Dvn., Bangalore.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್:81/2003, ದಿನಾಂಕ: 13ನೇ ನವೆಂಬರ್ 2003**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

1) ರಂಗಮ್ಮ ಕೋಂ ಲೇಟ್ ತಿಮ್ಮಯ್ಯ, 28 ವರ್ಷ ವಯಸ್ಸು,
2) ರವಿಕುಮಾರ ಬಿನ್ ಲೇಟ್ ತಿಮ್ಮಯ್ಯ, 10 ವರ್ಷ ವಯಸ್ಸು,
3) ಜಿ.ಟಿ. ಕವಿತ ಮಗಳು ಲೇಟ್ ತಿಮ್ಮಯ್ಯ, 2 ಹಾಗೂ 3ನೇ ಅರ್ಜಿದಾರರ ಪರವಾಗಿ 1ನೇ ಅರ್ಜಿದಾರರು ಪ್ರತಿನಿಧಿಸುವರು.
4) ತಿಮ್ಮಕ್ಕ ಕೋಂ ಲೇಟ್ ವೆಂಕಟಪ್ಪ, 48 ವರ್ಷ, ವಿಳಾಸ: ಗೊಂದಿಹಳ್ಳಿ, ಬುಕ್ಕಾ ಪಟ್ನಾ ಪೋ:, ಕೊರಟಗೆರೆ ತಾ:

1) ಕೆ.ಟಿ. ರಂಗಪ್ಪಾ ಬಿನ್ ತಿಮ್ಮರಾಯಪ್ಪಾ, ವಾಸ: ದೊಡ್ಡಪೇಟೆ ಬೀದಿ, ಕೊರಟಗೆರೆ ಟೌನ್, ತುಮಕೂರು ಜಿಲ್ಲೆ.
2) ದಿ ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂ. ಲಿ., ಟಿ.ಜಿ.ಎಂ.ಎ. ಬಿಲ್ಡಿಂಗ್ ಜೆ.ಸಿ. ರಸ್ತೆ, ತುಮಕೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ರಂಗಮ್ಮ ಇವರು ತಮ್ಮ ಯಜಮಾನರಾದ ತಿಮ್ಮಯ್ಯ ಇವರು ಪ್ರತಿವಾದಿ-1 ಇವರ ಟ್ರ್ಯಾಕ್ಟರ್-ಟ್ರೇಲರ್ ನಂ.ಸಿಎನ್‌ಟಿ-9923-9924 ವಾಹನದಲ್ಲಿ, ಕೂಲಿ ಆಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 8.6.2003 ರಂದು ಉದ್ಯೋಗ ಸಮಯದಲ್ಲಿ ಅಗ್ರಹಾರ ಗ್ರಾಮ ದೊಡ್ಡ ಸೇತುವೆ ಬಳಿ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್. 1299

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್:82/2003, ದಿನಾಂಕ: 12ನೇ ನವೆಂಬರ್ 2003**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

1) ಮೊಹಿದ್ದೀನ್ ಸಾಬ್ ಅಲಿಯಾಸ್ ಅಣ್ಣಾ ಮೊಹಿದ್ದೀನ್ ಸಾಬ್ ಬಿನ್ ಬುಡೇನ್ ಸಾಬ್, ವಯಸ್ಸು 55 ವರ್ಷ
2) ಸೈಯ್ಯದಾಬಿ ಕೋಂ ಅಣ್ಣ ಮೊಹಿದ್ದೀನ್ ಸಾಬ್, ವಯಸ್ಸು ಸುಮಾರು 45 ವರ್ಷ
ವಾಸ: ಬ್ರಹ್ಮಸಂದ್ರ, ಮಜುರಾ ಚಂಗಾವರ ಗ್ರಾಮ, ಗೌಡಗೆರೆ ಹೋಬಳಿ, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ.

1) ಜಲೀಲ್ ಬಿನ್ ಅಹ್ಮದ್ ಗೌಸ್, ವಾಸ: ಬೇಗಂ ಮೊಹಲ್ಲಾ, ಶಿರಾ ಟೌನ್, ತುಮಕೂರು ಜಿಲ್ಲೆ.
2) ದಿ ನ್ಯಾಷನಲ್ ಇನ್‌ಶ್ಯೂರೆನ್ಸ್ ಕಂ. ಲಿ., ಬ್ರ್ಯಾಂಚ್ ಆಫೀಸ್, ವಿವೇಕಾನಂದ ರಸ್ತೆ, ತುಮಕೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀ ಮೊಹದ್ದೀನ್ ಸಾಬ್ ಮತ್ತು ಸಯ್ಯದಾಬಿ ಇವರು ತಮ್ಮ ಮಗನಾದ ಬುಡೇನ್ ಸಾಬ್ ಇವರು ಪ್ರತಿವಾದಿ-1 ಇವರ ಲಾರಿ ಸಂಖ್ಯೆ: ಕೆಎ-06-8384 ವಾಹನದಲ್ಲಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 11.5.2003 ರಂದು ಉದ್ಯೋಗ ಸಮಯದಲ್ಲಿ ಕುದೂರು ಪೊಲೀಸ್ ಠಾಣೆ ವ್ಯಾಪ್ತಿಯಲ್ಲಿ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ

ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್. 1300

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್:83/2003, ದಿನಾಂಕ: 13ನೇ ನವೆಂಬರ್ 2003**

**ಅರ್ಜಿದಾರರು**

1) ರತ್ನಮ್ಮ ಕೋಂ ಲೇಟ್ ಕೃಷ್ಣಪ್ಪ ಅಲಿಯಾಸ್ ಕೃಷ್ಣ ಎಚ್.ಕೆ. ವಯಸ್ಸು 35 ವರ್ಷ,
2) ಕೆ. ಆಶಾ ಮಗಳು ಲೇಟ್ ಕೃಷ್ಣಪ್ಪಾ ಅಲಿಯಾಸ್ ಕೃಷ್ಣಾ ಎಚ್.ಕೆ., ವಯಸ್ಸು 10 ವರ್ಷ,
3) ಶಕುಂತಲಾ ಮಗಳು ಲೇಟ್ ಕೃಷ್ಣಪ್ಪಾ ಅಲಿಯಾಸ್ ಕೃಷ್ಣಾ ಎಚ್.ಕೆ., ವಯಸ್ಸು 8 ವರ್ಷ, ವಾಸ: ಅಲಕಟ್ಟೆ, ತಮಾಡಿಹಳ್ಳಿ ಪೋಸ್ಟ್, ಸಿ.ಎನ್. ಹಳ್ಳಿ ತಾಲ್ಲೂಕು.

**ವಿರುದ್ಧ**

**ಪ್ರತಿವಾದಿಗಳು**

1) ಜಾಫರ್ ಸಾದಿಕ್ ಬಿನ್ ಅಬ್ದುಲ್ ಖುದ್ದೂಸ್, ಎಚ್-ಬಿ-ಎಕ್ಸ್‌ಪ್ರೆಸ್ ಬಸ್ ಮಾಲೀಕರು, ಗಾಂಧಿ ಪೇಟೆ, ಹುಳಿಯಾರ್ ಟೌನ್, ಸಿ.ಎನ್. ಹಳ್ಳಿ ತಾಲ್ಲೂಕು.
2) ನ್ಯಾಷನಲ್ ಇನ್‌ಶ್ಯೂರೆನ್ಸ್ ಕಂ. ಲಿ., ಎಸ್-7 ತಿರುವಿಕಾ - ಇಂಡಸ್ಟ್ರಿಯಲ್ ಎಸ್ಟೇಟ್, ಗುಂಡ್ಯಾ ಡಿ.ಒ. ಚೆನ್ನೈ.

**ಪ್ರಕಟಣೆ**

ಅರ್ಜಿದಾರರಾದ ಶ್ರೀ ರತ್ನಮ್ಮ ಇವರು ತಮ್ಮ ಯಜಮಾನರಾದ ಕೃಷ್ಣಪ್ಪ ಇವರು ಪ್ರತಿವಾದಿ-1 ಇವರ ಎಚ್-ಬಿ ಬಸ್ ನಂ.ಕೆಎ-06/468, ವಾಹನದಲ್ಲಿ ಚಾಲಕರಾಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 6.9.2003 ರಂದು ಉದ್ಯೋಗ ಸಮಯದಲ್ಲಿ ಹಟ್ನ ಸಮೀಪದ ವಾಟರ್ ಟ್ಯಾಂಕ್ ಹತ್ತಿರ ಸೈಕಲ್ ಸವಾರನು ಎದುರಿಗೆ ಬಂದಿದ್ದು, ಅವನನ್ನು ತಪ್ಪಿಸಲು ಹೋಗಿ ಮರಕ್ಕೆ ಡಿಕ್ಕಿ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್. 1301

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್:84/2003, ದಿನಾಂಕ: 13ನೇ ನವೆಂಬರ್ 2003**

**ಅರ್ಜಿದಾರರು**

1) ಜ್ಯೋತಿ ಉರುಫ್ ನರಸಮ್ಮ ಕೋಂ ಲೇಟ್ ಜಿ. ಸತೀಶ್‌ಕುಮಾರ್, ವಯಸ್ಸು 19 ವರ್ಷ,
2) ಗಂಗಾಧರಪ್ಪ ಬಿನ್ ಕೆಂಪಯ್ಯ, ವಯಸ್ಸು 45 ವರ್ಷ,
3) ಪೂಜಮ್ಮ ಕೋಂ ಗಂಗಾಧರಪ್ಪ 40 ವರ್ಷ
4) ಸುಮಂತ ಬಿನ್ ಲೇಟ್ ಜಿ. ಸತೀಶ್‌ಕುಮಾರ್, ವಿಳಾಸ: ಅರಳಿ ಮರದ ಪಾಳ್ಯ, ಶಿರಾ ಗೇಟ್, ತುಮಕೂರು.

**ವಿರುದ್ಧ**

**ಪ್ರತಿವಾದಿಗಳು**

1) ಪರಮ ಶಾಂತಯ್ಯ ಬಿನ್ ಸಿದ್ದಲಿಂಗಪ್ಪಾ, 31 ವರ್ಷ, ಶ್ರೀರಂಗ ಪಾಲಿಟೆಕ್ನಿಕ್, ಬೆಳಗುಂಬ ಊರ್ಡಿಗೆರೆ ಹೋಬಳಿ, ತುಮಕೂರು ತಾ:.
2) ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ., ಮಲ್ಲಪ್ಪ ಕಾಂಪ್ಲೆಕ್ಸ್, 1ನೇ ಫ್ಲೋರ್, ಪಿ.ಬಿ. ನಂ.143, ಶಿವಮೊಗ್ಗ.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಜ್ಯೋತಿ ಉರುಫ್ ನರಸಮ್ಮ ಇವರು ತಮ್ಮ ಯಜಮಾನರಾದ ಜಿ. ಸತೀಶ್‌ಕುಮಾರ್ ಇವರು ಪ್ರತಿವಾದಿ ಪರಮಶಾಂತಯ್ಯ ಇವರ ಟೆಂಪೋಟ್ರಾಕ್ಸ್ ನಂ. ಕೆಎ-06-ಎ-3573 ವಾಹನದಲ್ಲಿ ಚಾಲಕನಾಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 11.9.2003 ರಂದು ಉದ್ಯೋಗ ಸಮಯದಲ್ಲಿ ತಮ್ಮಯ್ಯ ನರ್ಸಿಂಗ್ ಹೋಂ, ತುಮಕೂರು, ಹತ್ತಿರ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ

ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್. 1302

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್:85/2003, ದಿನಾಂಕ: 13ನೇ ನವೆಂಬರ್ 2003**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

ಅರ್ಜಿದಾರರು:

1) ಶ್ರೀಮತಿ ಸಿದ್ದಗಂಗಮ್ಮಾ, 50 ವರ್ಷ, ಕೋಂ ಲೇಟ್ ಹನುಮಂತರಾಯಪ್ಪಾ
2) ಕು: ಕಲಾವತಿ, 18 ವರ್ಷ, ಲೇಟ್ ಹನುಮಂತರಾಯಪ್ಪಾರವರ ಮಗಳು
3) ಶಿವರಾಜ, ವಯಸ್ಸು 15 ವರ್ಷ, ಬಿನ್ ಲೇಟ್ ಹನುಮಂತರಾಯಪ್ಪಾ,
4) ಕು: ಜ್ಯೋತಿ, ವಯಸ್ಸು, 14 ವರ್ಷ, ಲೇಟ್ ಹನುಮಂತರಾಯಪ್ಪರವರ ಮಗಳು ವಿಳಾಸ: ಮದ್ದಕ್ಕನ ಹಳ್ಳಿ, ಗೌಡಗೆರೆ ಹೋಬಳಿ, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ.

ಪ್ರತಿವಾದಿಗಳು:

1) ಎಸ್. ರವಿಚಂದ್ರನ್ ಉರುಫ್ ಎಸ್.ಆರ್.ಚಂದ್ರು, ರಘುಪ್ರಿಯಾ ಗ್ರಾನೈಟ್, ಬಾಲಾಜಿನಗರ, ಶಿರಾ ಟೌನ್, ತುಮಕೂರು ಜಿಲ್ಲೆ.
2) ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂ. ಲಿ., ಟಿಜಿಎಂಸಿ ಬಿಲ್ಡಿಂಗ್, 1ನೇ ಫ್ಲೋರ್, ಜೆ.ಸಿ. ರಸ್ತೆ, ತುಮಕೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಸಿದ್ದಗಂಗಮ್ಮ ಇವರು ತಮ್ಮ ಮಗ, ವೆಂಕಟರಾಜು ಇವರು ಪ್ರತಿವಾದಿ-1 ಇವರ ಕೆಎ-09-9297 ವಾಹನದಲ್ಲಿ ಕ್ಲೀನರ್ ಆಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 24.8.2002 ರಂದು ಉದ್ಯೋಗ ಸಮಯದಲ್ಲಿ ಮದ್ದಕ್ಕನಹಳ್ಳಿ ಯಿಂದ ತಾವರೆಕೆರೆ ಕಡೆಗೆ ಹೋಗುವಾಗ, ಕಾಡಸಿದ್ದಪ್ಪನವರ ಜಮೀನಿನ ಹತ್ತಿರ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್. 1303

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್:86/2003, ದಿನಾಂಕ: 13ನೇ ನವೆಂಬರ್ 2003**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

ಅರ್ಜಿದಾರರು:

1) ಶ್ರೀಮತಿ ನಿಂಗಮ್ಮ ಕೋಂ ಲೇಟ್ ಲಕ್ಷ್ಮಣ, 23 ವರ್ಷ,
2) ಮಾಸ್ಟರ್ ಸಂತೋಷ್ ಬಿನ್ ಲೇಟ್ ಲಕ್ಷ್ಮಣ, 6 ವರ್ಷ,
3) ಬೇಬಿ ದರ್ಶಿನಿ ಮಗಳು ಲೇಟ್ ಲಕ್ಷ್ಮಣ, 2 ವರ್ಷ,
4) ಶ್ರೀಮತಿ ಪುಟ್ಟಮ್ಮ ಕೋಂ ಕಡೂರಪ್ಪಾ, 68 ವರ್ಷ, ವಿಳಾಸ: ಹುಲಿಗೆರೆ ಗ್ರಾಮ, ಮದಲೂರು ಪೋಸ್ಟ್, ಕಸಬಾ ಹೋಬಳಿ, ಶಿರಾ ತಾಲ್ಲೂಕು.

ಪ್ರತಿವಾದಿಗಳು:

1) ಶ್ರೀಮತಿ ಅಮ್ಮಾಜಮ್ಮಾ, 60 ವರ್ಷ, ಕೋಂ ಸಣ್ಣೀರಪ್ಪ, R/o ಹುಲಿಗೆರೆ ಮದಲೂರ್ ಪೋಸ್ಟ್, ಶಿರಾ ತಾಲ್ಲೂಕು.
2) ದಿ ಮ್ಯಾನೇಜರ್, M/s ನ್ಯಾಶನಲ್ ಇನ್‌ಶ್ಯೂರೆನ್ಸ್ ಕಂ. ಲಿ., ಮುದ್ದಪ್ಪಾ ಕಾಂಪ್ಲೆಕ್ಸ್, ಶಿರಾಣಿ ರಸ್ತೆ, ತುಮಕೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ನಿಂಗಮ್ಮ ಇವರು ತಮ್ಮ ಯಜಮಾನರಾದ ಲಕ್ಷ್ಮಣ ಇವರು ಪ್ರತಿವಾದಿ-1 ಇವರ ಟ್ರ್ಯಾಕ್ಟರ್ ಟ್ರೇಲರ್ ಸಂಖ್ಯೆ: ಕೆಎ-06-ಟಿ-2146-2147 ವಾಹನದಲ್ಲಿ ಕೂಲಿ ಆಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 26.7.2003 ರಂದು ಉದ್ಯೋಗ ಸಮಯದಲ್ಲಿ ಹರಿಯಜ್ಜನಹಳ್ಳಿ ಗ್ರಾಮದಲ್ಲಿ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ

ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್. 1304

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್:87/2003, ದಿನಾಂಕ: 13ನೇ ನವೆಂಬರ್ 2003**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

1) ಅನ್ವರ್‌ಬೇಗ್, 55 ವರ್ಷ ಬಿನ್ ಅಬ್ದುಲ್ಲ ಬೇಗ್,
2) ಬೀಬಿಜಾನ್, 50 ವರ್ಷ ಕೋಂ ಅನ್ವರ್‌ಬೇಗ್,
3) ಮೊಹ್ಮದ್ ಬೇಗ್, 10 ವರ್ಷ, ಬಿನ್ ಅನ್ವರ್‌ಬೇಗ್,
4) ಹಸೀನಾಬೇಗಂ ಮಗಳು ಅನ್ವರ್‌ಬೇಗ್.
ವಿಳಾಸ: ಬೇಗಂ ಮೊಹಲ್ಲಾ, ಶಿರಾ ಟೌನ್, ಶಿರಾ.

1) ಜಲೀಲ್ @ ಮೊಹಮ್ಮದ್ ಜಲೀಲ್‌ಸಾಬ್ ಬಿನ್ ಅಹ್ಮದ್‌ಗೌಸ್ ಸಾಬ್, ಬೇಗಂ ಮೊಹಲ್ಲಾ, ಶಿರಾ ಟೌನ್, ತುಮಕೂರು ಜಿಲ್ಲೆ.
2) ನ್ಯಾಷನಲ್ ಇನ್‌ಶ್ಯೂರೆನ್ಸ್ ಕಂ. ಲಿ., ಮುದ್ದಪ್ಪ ಕಾಂಪ್ಲೆಕ್ಸ್, ಶಿರಾಣಿ ರಸ್ತೆ, ತುಮಕೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀ/ಶ್ರೀಮತಿ ಅನ್ವರ್‌ಬೇಗ್ ಹಾಗೂ ಬೀಬಿಜಾನ್ ಇವರು ತಮ್ಮ ಮಗ ಮಹಬೂಬ್ ಬೇಗ್ @ ತಿಪ್ಪೇಸ್ವಾಮಿ ಇವರು ಪ್ರತಿವಾದಿ-1 ಇವರ ಲಾರಿ ಕೆಎ-06-8384 ವಾಹನದಲ್ಲಿ ಚಾಲಕನಾಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 11.5.2003 ರಂದು ಉದ್ಯೋಗ ಸಮಯದಲ್ಲಿ ಹುಲ್ಲೇನಹಳ್ಳಿ ಗೇಟ್, ಗೋಪಾಲಯ್ಯ ಇವರ ಜಮೀನಿನ ಹತ್ತಿರ ಮರ್‌ಡರ್ ಆಗಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್. 1305

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್:88/2003, ದಿನಾಂಕ: 13ನೇ ನವೆಂಬರ್ 2003**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

1) ಗಿರಿಜಮ್ಮ ಕೋಂ ಲೇಟ್ ನಾರಾಯಣಪ್ಪಾ, 35 ವರ್ಷ,
2) ಜಗದೀಶ ಬಿನ್ ಲೇಟ್ ನಾರಾಯಣಪ್ಪಾ, 6 ವರ್ಷ,
3) ಗೌತಮಿ ಮಗಳು ಲೇಟ್ ನಾರಾಯಣಪ್ಪಾ, 7 ವರ್ಷ,
ವಿಳಾಸ: ಗೊಂದಿಹಳ್ಳಿ ರೋಡ್, ಬಿಹೈಂಡ್ ಕಾಳಿದಾಸ ಸ್ಕೂಲ್, ಕೊರಟಗೆರೆ ಟೌನ್.

1) ಶ್ರೀಮತಿ ಎನ್. ಸರೋಜ ಕೋಂ ಲೇಟ್ ಸತ್ಯನಾರಾಯಣ, ಮಾಲೀಕರು, ಬಾಲಾಜಿ ಟ್ರಾನ್ಪೋರ್ಟ್, ಅಶೋಕನಗರ, ಬಿ.ಎಚ್. ರಸ್ತೆ, ತುಮಕೂರು.
2) ದಿ ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂ. ಲಿ., ಟಿ.ಜಿ.ಎಂ.ಎ. ಬಿಲ್ಡಿಂಗ್, ಜೆ.ಸಿ. ರಸ್ತೆ, ತುಮಕೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಗಿರಿಜಮ್ಮ ಇವರು ತಮ್ಮ ಯಜಮಾನರಾದ ನಾರಾಯಣಪ್ಪಾ ಇವರು ಪ್ರತಿವಾದಿ-1 ಇವರ ಕೆಎ-06-ಡಿ-6565 ರಲ್ಲಿ ಚಾಲಕರಾಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 8.7.2003 ರಂದು ಉದ್ಯೋಗ ಸಮಯದಲ್ಲಿ ಪಾವಗಡ ಬಸ್ ನಿಲ್ದಾಣದಲ್ಲಿ ಎದೆ ನೋವಿನಿಂದ ಕೆಳಗೆ ಬಿದ್ದು ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್. 1306

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು

**ಸಂಖ್ಯೆ: ಕಾಅತು:ಕಾಪಕಾ:ಸಿಆರ್:98/2003, ದಿನಾಂಕ: 15ನೇ ನವೆಂಬರ್ 2003**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1) ನೂರ್‌ಜಾನ್, 45 ವರ್ಷ, ಕೋಂ ಮುಕ್ತಾರ್ ಅಹ್ಮದ್ ಗೂಡ್‌ಸೆಡ್ ಕಾಲೋನಿ, ತುಮಕೂರು.
2) ಮುಕ್ತಾರ್ ಅಹ್ಮದ್ ಬಿನ್ ಅಬ್ದುಲ್ ಕರೀಮ್, 52 ವರ್ಷ ವಿಳಾಸ: ಗುಡ್‌ಶೆಡ್ ಕಾಲೋನಿ, ತುಮಕೂರು.

1) ಸೈಯ್ಯದ್ ಸನಾವುಲ್ಲಾ ಬಿನ್ ಸೈಯ್ಯದ್ ಹನೀಫ್, ಆಲಪ್ಪಾ ಸ್ಟ್ರೀಟ್ ಆಯಿಲ್‌ಮಿಲ್ ರಸ್ತೆ, ತುಮಕೂರು.
2) ದಿ ನ್ಯಾಷನಲ್ ಇನ್‌ಶ್ಯೂರೆನ್ಸ್ ಕಂ. ಲಿ., ವಿವೇಕಾನಂದ ರಸ್ತೆ, ತುಮಕೂರು.

### ಪ್ರಕಟಣೆ

ಅರ್ಜಿದಾರರಾದ ಶ್ರೀಮತಿ ನೂರ್‌ಜಾನ್ ಹಾಗೂ ಮುಕ್ತಾರ್ ಅಹ್ಮದ್ ಇವರು ತಮ್ಮ ಮಗನಾದ ಸಾಧಿಕ್ ಪಾಶಾ @ ಸಾಧಿಕ್‌ಸಾಬ್ ಇವರು ಪ್ರತಿವಾದಿ-1 ಇವರ ಲಾರಿ ಸಂಖ್ಯೆ: ಕೆಎ-02-2439 ವಾಹನದಲ್ಲಿ ಕ್ಲೀನರ್ ಆಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 13.10.2003 ರಂದು 1.30 p.m. ಗಂಟೆಗೆ ಉದ್ಯೋಗ ಸಮಯದಲ್ಲಿ ಕುಮಾರಪಟ್ನಂ,ನ M.A.F. ಫ್ಯಾಕ್ಟ್ರಿ ಹತ್ತಿರ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್. 1307

## 6ನೇ ಎ.ಸಿ.ಎಂ.ಸಿ. ನ್ಯಾಯಾಲಯದ ಕಛೇರಿ, ಬೆಂಗಳೂರು ಮಹಾನಗರ

### ಅಧಿಸೂಚನೆ

**ಸಿಮಿಸ್ ನಂ.201/2003**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಈ ಕೆಳಕಂಡ (ಪತ್ರದ ಜೊತೆಯಲ್ಲಿ ಲಗತ್ತಿಸಿರುವ) ಮಾಲುಗಳನ್ನು ವಿಲ್ಸನ್ ಗಾರ್ಡನ್ ಪೊಲೀಸ್ ಠಾಣೆಯಲ್ಲಿ ಅಮಾನತ್ತುಪಡಿಸಲಾಗಿದ್ದು ವಾರಸುದಾರರು ಇರುವುದಿಲ್ಲ, ಇದ್ದಲ್ಲಿ ಅವರು ತಮ್ಮ ವಾರಸುದಾರಿಕೆಯನ್ನು ಈ ವಿಷಯ ಪ್ರಕಟಗೊಂಡ 30 ದಿನಗಳ ಒಳಗಾಗಿ ರುಜುವಾತುಪಡಿಸಿ ತಮ್ಮ ಮಾಲುಗಳನ್ನು ಪಡೆಯಬಹುದಾಗಿದೆ. ತಪ್ಪಿದಲ್ಲಿ, ಈ ಮಾಲುಗಳನ್ನು ಮುಟ್ಟುಗೋಲು ಹಾಕಲಾಗುವುದು.

**ವಾರಸುದಾರರಿಲ್ಲದ ಮಾಲುಗಳ ಪಟ್ಟಿ**

| ಕ್ರ.ಸಂ. | ಸಿಮೀಸ್ ನಂ. | ಮಾಲುಪಟ್ಟಿ ಸಂಖ್ಯೆ | ಮಾಲುಗಳ ವಿವರ |
|---|---|---|---|
| 1 | 734/96 | 143/96 | 1) ನೂರು ರೂಪಾಯಿ ಒಂದು ನೋಟು<br>2) ಚಿನ್ನದಂತಿರುವ ಒಂದು ಉಂಗುರ<br>3) ಒಂದು ಸಿಟಿಜನ್ ಕೈ ಗಡಿಯಾರ |
| 2 | 282/98 | 35/98 | ಒಂದು ಮಿಲ್ಟ್ರಿ ಖಾಕಿ ಬಣ್ಣದ ಬ್ಯಾಗ್ ಇದರಲ್ಲಿ<br>1) ಒಂದು ಡ್ರಿಲ್ಲಿಂಗ್ ಮೆಷಿನ್ 2) ಸ್ಕ್ರೂ ಡ್ರೈವರ್‌ನ ಒಂದು ಸೆಟ್. 3) ಮೂರು ಕಟಿಂಗ್ ಪ್ಲೈಯರ್‌ಗಳು, 4) ಉಳಿ ಸುತ್ತಿಗೆ. 5) ಡ್ರಿಲ್ ಬಿಟ್‌ಗಳು. 6) ಒಂದು ದೊಡ್ಡ ಸ್ಕ್ರೂ ಡ್ರೈವರ್ |
| 3 | 371/98 | 50/98 | ಒಂದು ಗುಲಾಬಿ ಬಣ್ಣದ ಪ್ಲಾಸ್ಟಿಕ್ ಪೆಟ್ಟಿಗೆ ಇದರಲ್ಲಿ ರಸ್ತೆ ಮಾಪನ ಮಾಡುವ ಬೈನಾಕ್ಯುಲರ್ ಇರುತ್ತೆ. |

ಎನ್.ಎಸ್. ನೇಗಿನಾಳ್
6ನೇ ಎ.ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು ನಗರ.

ಪಿ.ಆರ್. 1308

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಪ್ರ.ಸಂ. ಕಾಅದಾ:ಕಾನಪ:ಸಿಆರ್-187/2003, ದಿನಾಂಕ: 13ನೇ ನವೆಂಬರ್ 2003**

**ಅರ್ಜಿದಾರರು** **ಪ್ರತಿವಾದಿಗಳು**

1) ಮಹ್ಮದ್ ಅನೀಫ್ ಬಿನ್ ಚಾಂದ್‌ಫೀರ್‌ಸಾಬ್, 50 ವರ್ಷ
2) ಅರಿಫುನ್ನಿಸ್ಸಾ ಮಹ್ಮದ್ ಅನೀಫ್‌ರವರ ಪತ್ನಿ, 40 ವರ್ಷ
3) ತಸ್ಲೀಮಾ ಮಹ್ಮದ್ ಅನೀಫ್‌ರವರ ಮಗಳು, 17 ವರ್ಷ 2ನೇ ಕ್ರಾಸ್, ಅಜಾದ್‌ನಗರ, ದಾವಣಗೆರೆ.

1) ನಾಗಭೂಷಣ ಬಿನ್ ಜಯರಾಮಪ್ಪ, ಕೆ.ಹೆಚ್. ರಸ್ತೆ, ಮಧುಗಿರಿ, ತುಮಕೂರು ಜಿಲ್ಲೆ.
2) ಡಿವಿಜನಲ್ ಮ್ಯಾನೇಜರ್, ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ., ಚಾಮರಾಜಪೇಟೆ, ದಾವಣಗೆರೆ.

**ಪ್ರಕಟಣೆ**

ಶ್ರೀ/ಶ್ರೀಮತಿ (1) ಮಹ್ಮದ್ ಅನೀಫ್ (2) ಅರಿಫುನ್ನಿಸ್ಸಾ (3) ತಸ್ಲೀಮಾ ಇವರುಗಳಾದ ತಾವು ಮೃತ ಇಬ್ರಾಹಿಂ ಕಲೀಲ್ ಇವರ ತಾಯಿ, ತಂದೆ ಮತ್ತು ತಂಗಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಇಬ್ರಾಹಿಂ ಕಲೀಲ್ ರವರು ಒಂದನೇ ಪ್ರತಿವಾದಿಗಳಾದ ನಾಗಭೂಷಣ ಇವರ ಟಾಟಾ ಸುಮೋ ದಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ, ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್. 1310

ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ,
ದಾವಣಗೆರೆ ಜಿಲ್ಲೆ, ದಾವಣಗೆರೆ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂ. ಕಾಅದಾ:ಕಾನಪ:ಸಿಆರ್-186/2003, ದಿನಾಂಕ: 13ನೇ ನವೆಂಬರ್ 2003**

**ಅರ್ಜಿದಾರರು**

1) ಶ್ರೀಮತಿ ಸಿಕ್ತಿಬಾಯಿ ಶಂಕರನಾಯ್ಕರವರ ಪತ್ನಿ, 45 ವರ್ಷ
2) ಶಂಕರನಾಯ್ಕ್ ಬಿನ್ ಲಕ್ಷ್ಮನಾಯ್ಕ್, 50 ವರ್ಷ
3) ಅಮ್ಮಿಬಾಯಿ, ಚಂದ್ರನಾಯ್ಕ್‌ರವರ ಪತ್ನಿ, 30 ವರ್ಷ
4) ಶಿವಕುಮಾರ್ ಬಿನ್ ಚಂದ್ರನಾಯ್ಕ್, 12 ವರ್ಷ
5) ನಿರ್ಮಲಾ, ಚಂದ್ರನಾಯ್ಕ್‌ರವರ ಮಗಳು, 10 ವರ್ಷ
ಆಲೂರಹಟ್ಟಿ, ದಾವಣಗೆರೆ (ತಾ).

**ಪ್ರತಿವಾದಿಗಳು**

1) ಕಾಳನಾಯ್ಕ್ ಬಿನ್ ಜುಲ್ಯಾನಾಯ್ಕ್ @
ಗಿಡ್ಡನಾಯ್ಕ್, ಆಲೂರಹಟ್ಟಿ,
ದಾವಣಗೆರೆ ತಾಲ್ಲೂಕು.
2) ನ್ಯಾಷನಲ್ ಇನ್ಸೂರೆನ್ಸ್ ಕಂ. ಲಿ.,
ಚಾಮರಾಜಪೇಟೆ, ದಾವಣಗೆರೆ.

**ಪ್ರಕಟಣೆ**

ಶ್ರೀ/ಶ್ರೀಮತಿ (1) ಸಿಕ್ತಿಬಾಯಿ (2) ಶಂಕರನಾಯ್ಕ್ (3) ಅಮ್ಮಿಬಾಯಿ (4) ಶಿವಕುಮಾರ್, (5) ನಿರ್ಮಲಾ ಇವರುಗಳಾದ ತಾವು ಮೃತ ಚಂದ್ರನಾಯ್ಕ್ ಇವರ ತಾಯಿ, ತಂದೆ ಮತ್ತು ಹೆಂಡತಿ ಹಾಗೂ ಮಕ್ಕಳು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಚಂದ್ರನಾಯ್ಕ್ ರವರು ಒಂದನೇ ಪ್ರತಿವಾದಿಗಳಾದ ಕಾಳನಾಯ್ಕ್ ಇವರ ಟ್ರ್ಯಾಕ್ಟರ್‌ರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ, ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್. 1309

ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ,
ದಾವಣಗೆರೆ ಜಿಲ್ಲೆ, ದಾವಣಗೆರೆ.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ:529:ಡಿಟಿಸಿಆರ್:2002-2003, ದಿನಾಂಕ: 19ನೇ ನವೆಂಬರ್ 2003**

**ಉಪಸ್ಥಿತರು:** ಗೋವಿಂದಪ್ಪ
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದ.ಕ.ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:** **ವಿರುದ್ಧ** **ಆರೋಪಿಗಳು:**

ಅಬಕಾರಿ ನಿರೀಕ್ಷಕರು,
ಮಂಗಳೂರು ಉಪ ವಿಭಾಗ, ಮಂಗಳೂರು.

1. ಬಜಾಜ್ ಸ್ಕೂಟರ್ ಚಾಲಕ ಪರಾರಿಯಾಗಿರುತ್ತಾರೆ.

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ನಿರೀಕ್ಷಕರು, ಮಂಗಳೂರು ಉಪ ವಿಭಾಗ, ಮಂಗಳೂರುರವರು ದಿನಾಂಕ: 16.03.2003 ರಂದು ಸಂಜೆ ಸುಮಾರು 7.00 ಗಂಟೆಯ ಸಮಯದಲ್ಲಿ ತಮ್ಮ ಸಿಬ್ಬಂದಿಯೊಂದಿಗೆ ಮಂಗಳೂರು ನಗರದ ಕೆ.ಎಸ್.ಆರ್.ಟಿ.ಸಿ. ಬಸ್ ನಿಲ್ದಾಣದ ಮುಂಭಾಗದ

ರಸ್ತೆಯಲ್ಲಿ ರಸ್ತೆ ಗಸ್ತು ತಿರುಗುತ್ತಿರುವಾಗ ಬಿಜೈ ಚರ್ಚ್ ರಸ್ತೆ ಅಭಿಮುಖವಾಗಿ ಇಲಾಖಾ ವಾಹನದಲ್ಲಿ ಬರುತ್ತಿರುವಾಗ ಸುಮಾರು 10 ಮೀಟರ್ ಮುಂಭಾಗದಲ್ಲಿ ಓರ್ವ ವ್ಯಕ್ತಿ ತನ್ನ ದ್ವಿಚಕ್ರ ವಾಹನ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಸಿಎನ್‌ಎಕ್ಸ್-210 ರಲ್ಲಿ ಭಾರವಾದ ವಸ್ತುವನ್ನು ಗೋಣಿ ಚೀಲದಲ್ಲಿ ಕಟ್ಟಿ ಸಾಗಣೆ ಮಾಡುತ್ತಿರುವುದನ್ನು ನೋಡಿ ಅನುಮಾನಗೊಂಡು ಅದನ್ನು ತಪಾಸಣೆ ಮಾಡಲು ಅಬಕಾರಿ ನಿರೀಕ್ಷಕರು ನಿಲ್ಲಿಸಲು ಸೂಚನೆ ನೀಡಿದಾಗ ದ್ವಿಚಕ್ರ ವಾಹನದ ಚಾಲಕನು ಸ್ಕೂಟರ್‌ನ್ನು ಅಲ್ಲೇ ಬಿಟ್ಟು ಪರಾರಿಯಾದನು. ನಂತರ ದ್ವಿಚಕ್ರ ವಾಹನದ ಚಾಲಕನನ್ನು ಹಿಂಬಾಲಿಸಿದರೂ ಪತ್ತೆ ಹಚ್ಚಲು ಸಾಧ್ಯವಾಗದೆ ಹಿಂದಕ್ಕೆ ಬಂದು ಸದರಿ ಬಜಾಜ್ ಚೇತಕ್ ಸ್ಕೂಟರ್‌ನ್ನು ಸುತ್ತುವರಿದು ಪರಿಶೀಲಿಸಲಾಗಿ, ಅದರಲ್ಲಿ ಅಕ್ರಮವಾಗಿ ಸಾಗಾಟ ಮಾಡಲಾಗುತ್ತಿದ್ದ 40.000 ಲೀಟರ್ ಕಳ್ಳಭಟ್ಟಿ ಸಾರಾಯಿಯನ್ನು ಪತ್ತೆ ಹಚ್ಚಿ, ಸದರಿ ರಬ್ಬರ್ ಟ್ಯೂಬ್‌ನಲ್ಲಿರುವ ಭಟ್ಟಿ ಸಾರಾಯಿಂದ 180 ಎಂ.ಎಲ್. ಗಾತ್ರದ ಭಟ್ಟಿ ಸಾರಾಯಿಯನ್ನು ರಾಸಾಯನಿಕ ಪರೀಕ್ಷೆಗಾಗಿ ಪ್ರತ್ಯೇಕಿಸಿ ಸದರಿ ಬಾಟ್ಲಿಯ ಬಾಯಿಯನ್ನು ವಸ್ತ್ರದಾರದಿಂದ ಕಟ್ಟಿ ಇಲಾಖಾ ಸೀಲ್‌ನಿಂದ ಸೀಲ್ ಮಾಡಿರುತ್ತಾರೆ. ಅಕ್ರಮ ಕಳ್ಳಭಟ್ಟಿ ಸಾರಾಯಿಯನ್ನು ಹಾಗೂ ದ್ವಿಚಕ್ರ ವಾಹನ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಸಿಎನ್‌ಎಕ್ಸ್-210ನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿರುತ್ತಾರೆ. ಇದು ಅಬಕಾರಿ ಕಾಯಿದೆ ಕಲಂ 11, 14 ಮತ್ತು 15ರ ರೀತ್ಯಾ ಅಪರಾಧವಾಗಿದ್ದು, ಕಲಂ 34 ಮತ್ತು 38(ಎ)ರ ರೀತ್ಯಾ ಶಿಕ್ಷಾರ್ಹವಾಗಿದ್ದುದರಿಂದ ಸ್ಥಳ ಮಹಜರಿನೊಂದಿಗೆ ಜಪ್ತುಗೊಳಿಸಿರುತ್ತಾರೆ. ಸ್ಕೂಟರಿನಲ್ಲಿದ್ದ ಅಪರಾಧಿಯು ಪರಾರಿಯಾಗಿದ್ದು, ಮೊಕದ್ದಮೆ ಸಂಖ್ಯೆ: 49/2002-03 ದಿನಾಂಕ: 16.03.2003ರ ಮೂಲಕ ಪ್ರಕರಣವನ್ನು ದಾಖಲು ಮಾಡಿ ಮುಂದಿನ ತನಿಖೆಯ ಬಗ್ಗೆ ಅಬಕಾರಿ ನಿರೀಕ್ಷಕರು, ಹಂಪನಕಟ್ಟ ವಲಯ ಇವರಿಗೆ ಪ್ರಕರಣವನ್ನು ಸ್ವತ್ತುಗಳೊಂದಿಗೆ ಹಸ್ತಾಂತರಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಹಂಪನಕಟ್ಟ ವಲಯ ಇವರು ಪ್ರಕರಣದ ಮುಂದಿನ ತನಿಖೆಯನ್ನು ಕೈಗೊಂಡು ಜಪ್ತಿಗೊಳಿಸಲಾಗಿದ್ದ ಸಾರಾಯಿಂದ ತೆಗೆದ ಮಾದರಿ ಸೀಸೆಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿ ತಜ್ಞರ ವರದಿ ಪಡೆದಿರುತ್ತಾರೆ. ವಾಹನ ಮಾಲೀಕರ ಹೆಸರು ಮತ್ತು ವಿಳಾಸವನ್ನು ಸಾರಿಗೆ ಅಧಿಕಾರಿಗಳು, ಮಂಗಳೂರು ಇವರಿಂದ ಪಡೆದು ರಾಸಾಯನಿಕ ವಿಶ್ಲೇಷಣಾ ವರದಿಯನ್ನು ಮತ್ತು ಸಾರಿಗೆ ಅಧಿಕಾರಿಗಳು ನೀಡಿರುವ 'ಬಿ' ಎಕ್ಸ್‌ಟ್ರಾಕ್ಟ್‌ನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನೀಡಿರುವ 'ಬಿ' ಎಕ್ಸ್‌ಟ್ರಾಕ್ಟ್‌ನ ಪ್ರಕಾರ ವಾಹನ ಮಾಲೀಕರು ಶ್ರೀ ಜೋಸೆಫ್ ಪೌಲ್ ಪ್ಯಾಸ್, ಬಿನ್ ಜಾನ್ ಎಮೊನ್ವೆಲ್ ಪ್ಯಾಸ್, ಬಿಜೈ ಕಾಪಿಕಾಡ್, ಮಂಗಳೂರು ಎಂಬುದಾಗಿ ತಿಳಿದು ಬಂದಿದ್ದು ಈ ಪ್ರಾಧಿಕಾರವು ವಾಹನ ಮಾಲೀಕರಿಗೆ ದಿನಾಂಕ: 16.8.2003 ರಂದು ಕಾರಣ ಕೇಳಿ ನೋಟಿಸನ್ನು ನೀಡಿರುತ್ತದೆ. ಸದರಿ ಕಾರಣ ಕೇಳಿ ನೀಡಿದ ನೋಟೀಸನ್ನು ದಿನಾಂಕ: 25.8.2003 ರಂದು ವಾಹನ ಮಾಲೀಕರು ಸ್ವೀಕರಿಸಿದ್ದು ಈ ದಿನದವರೆಗೆ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನದ ಬಿಡುಗಡೆಗಾಗಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ವಾಹನವನ್ನು ಜಪ್ತುಪಡಿಸಿ ಈಗಾಗಲೇ 8 ತಿಂಗಳು ಅವಧಿ ಕಳೆದಿದ್ದು ಈವರೆಗೂ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನದ ಬಿಡುಗಡೆಗೆ ಯಾವುದೇ ಅರ್ಜಿ ಸಲ್ಲಿಸಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದ್ರಿ ಸೊತ್ತುಗಳು ತಮ್ಮವೆಂದು ಅವುಗಳು ಕಾನೂನುಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಹಾಜರುಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸೊತ್ತುಗಳಾಗಿದ್ದಲ್ಲಿ ಅಂತಹ ವಸ್ತುಗಳನ್ನು ಕಲಂ 43(ಸಿ) ಅಡಿಯಲ್ಲಿ ಅಕ್ರಮ ಮದ್ಯವನ್ನು ಮತ್ತು ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ.

ಆದರೆ ಈ ಪ್ರಕರಣವು ದಾಖಲಾಗಿ ಈಗಾಗಲೇ 8 ತಿಂಗಳು ಕಳೆದಿದ್ದರೂ ಮತ್ತು ಈ ಪ್ರಕರಣದಲ್ಲಿ ಜಪ್ತಿಪಡಿಸಲಾಗಿರುವ ವಾಹನ ಮಾಲೀಕರಿಗೆ ಕಾರಣ ಕೇಳಿ ನೋಟೀಸ್ ನೀಡಿದ್ದು ಅದನ್ನು ವಾಹನ ಮಾಲೀಕರು ಸ್ವೀಕರಿಸಿ 3 ತಿಂಗಳು ಕಳೆದಿದ್ದರೂ ಇಲ್ಲಿಯವರೆಗೆ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ, ಮತ್ತು ವಾಹನದ ಬಿಡುಗಡೆಗೆ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಈ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ: 16.3.2003 ರಂದು ಸದರಿ ಸ್ಕೂಟರಿನಲ್ಲಿ ಅಕ್ರಮವಾಗಿ 40.000 ಲೀಟರ್ ಕಳ್ಳಭಟ್ಟಿ ಸಾರಾಯಿಯನ್ನು ಸಾಗಾಣಿಕೆ ಮಾಡುತ್ತಿದ್ದುದನ್ನು ಅಬಕಾರಿ ನಿರೀಕ್ಷಕರು, ಮಂಗಳೂರು ಉಪ ವಿಭಾಗ, ಮಂಗಳೂರು ಇವರು ಪತ್ತೆ ಹಚ್ಚಿ, ಸ್ಥಳ ಮಹಜರಿನೊಂದಿಗೆ ಅಕ್ರಮ ಕಳ್ಳಭಟ್ಟಿ ಸಾರಾಯಿಯನ್ನು ಮತ್ತು ಕಳ್ಳಭಟ್ಟಿ ಸಾರಾಯಿಯ ಸಾಗಾಣಿಕೆಗೆ ಬಳಸಲಾಗಿದ್ದ ವಾಹನವನ್ನು ಜಪ್ತಿಪಡಿಸಿರುತ್ತಾರೆ. ಜಪ್ತುಪಡಿಸಿರುವ ದ್ರವ್ಯವು ರಾಸಾಯನಿಕ ತಜ್ಞರ ಪ್ರಕಾರ ಸಾರಾಯಿ ಎಂದು ಶೇಕಡಾ 27.10 ಮದ್ಯಾಂಶವು ಇರುವುದಾಗಿ ತಜ್ಞರು ದೃಢೀಕರಣ ನೀಡಿರುತ್ತಾರೆ. ಈ ಮೇಲಿನ ಹಿನ್ನಲೆಯಲ್ಲಿ ಪರಾರಿಯಾಗಿರುವ ಆರೋಪಿಯು ಕಾನೂನುಬಾಹಿರ ಕೃತ್ಯವನ್ನು ಎಸಗಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಬೀತಾಗಿರುತ್ತದೆ. ಅಲ್ಲದೆ ಈ ಪ್ರಕರಣದಲ್ಲಿ ಜಪ್ತುಗೊಳಿಸಿದ ವಾಹನ ಮಾಲೀಕರಿಗೆ ಈ ಪ್ರಾಧಿಕಾರವು ನೀಡಿರುವ ನೋಟೀಸ್ ಜಾರಿಯಾಗಿದ್ದರೂ ಸದರಿ ಮಾಲೀಕರು ಈ ಪ್ರಾಧಿಕಾರದ ಮುಂದೆ ಹಾಜರಾಗದೆ ಇರುವುದನ್ನು ಗಮನಿಸಿದಾಗ ವಾಹನ ಮಾಲೀಕರು ತನ್ನ ತಿಳುವಳಿಕೆಯಿಂದಲೇ ಈ ಕಾನೂನು ಬಾಹಿರ ಕೃತ್ಯಕ್ಕೆ ತೊಡಗಿಸಿರುವುದು ಸ್ಪಷ್ಟವಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಸದರಿ ಪ್ರಕರಣದಲ್ಲಿ ವಾಹನವನ್ನು ಮತ್ತು ಅಕ್ರಮ ಕಳ್ಳಭಟ್ಟಿ ಸಾರಾಯಿಯನ್ನು ಜಪ್ತುಪಡಿಸಿ ಸುಮಾರು 8 ತಿಂಗಳು ಕಳೆದಿದ್ದರೂ ಸದರಿ ಸ್ವತ್ತುಗಳಿಗೆ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗದೆ ಇರುವುದು ವಾಹನದ ಬಿಡುಗಡೆಗೆ ಕೋರಿ ಅರ್ಜಿ ಸಲ್ಲಿಸದೆ ಇರುವುದರಿಂದ ವಾಹನ ಮಾಲೀಕರೇ ತನ್ನ ತಿಳುವಳಿಕೆಯಿಂದಲೇ ಈ ಕಾನೂನು ಬಾಹಿರ ಕೃತ್ಯ ನಡೆದಿದೆ ಎಂದು ಭಾವಿಸಬಹುದಾಗಿದೆ. ಜಪ್ತುಪಡಿಸಿದ ವಾಹನವನ್ನು ತೆರೆದ ಜಾಗದಲ್ಲಿ ಇಟ್ಟಿರುವುದರಿಂದ ಮಳೆ, ಬಿಸಿಲು ಮುಂತಾದ ಹವಾಮಾನದ ವೈಪರೀತ್ಯದಿಂದ ವಾಹನವು ದಿನೇ ದಿನೇ ತನ್ನ ಗುಣಮಟ್ಟವನ್ನು ಕಳೆದುಕೊಳ್ಳುವ ಹಾಗೂ ಹಾಳಾಗುವ

ಸಾಧ್ಯತೆಗಳು ಇರುವುದರಿಂದ ಹಾಗೂ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತ ಎಂದು ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಂಡು ಈ ಆದೇಶ.

**ಆದೇಶ**

ಗೋವಿಂದಪ್ಪ ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43(ಎ) ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 43(ಬಿ)ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಕಲಂ 43(ಸಿ) ರನ್ವಯ ಅಬಕಾರಿ ನಿರೀಕ್ಷಕರು, ಮಂಗಳೂರು ಉಪ ವಿಭಾಗ, ಮಂಗಳೂರು ಇವರ ಮೊಕದ್ದಮೆ ಸಂಖ್ಯೆ: 49/2002-03, ದಿನಾಂಕ: 16.3.2003 ರಲ್ಲಿ ವಶಪಡಿಸಿಕೊಂಡಿರುವ ವಾಹನ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಸಿಎನ್‌ಎಕ್ಸ್-210ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 19.11.2003 ರಂದು ಶೀಘ್ರಲಿಪಿಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚುಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್. 1311

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ:645:ಡಿಟಿಸಿಆರ್:2002-2003, ದಿನಾಂಕ: 13ನೇ ನವೆಂಬರ್ 2003**

**ಉಪಸ್ಥಿತರು:** ಗೋವಿಂದಪ್ಪ
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದ.ಕ.ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**
ಪೊಲೀಸ್ ಉಪ ನಿರೀಕ್ಷಕರು,
ಉಳ್ಳಾಲ ಪೊಲೀಸ್ ಠಾಣೆ, ಉಳ್ಳಾಲ.

**ವಿರುದ್ಧ**

**ಆರೋಪಿಗಳು:**
1) ಶ್ಯಾಮ್ ಜೇಕಬ್ (31 ವರ್ಷ) ಬಿನ್ ಕೆ.ಪಿ. ಚಾಕೋ,
ಕೊಚಿಪರಂಬ್ ಮನೆ, ಚುನಗಂಮ್ಮೈಲಿ ಅಂಚೆ, ಅಲುವಾ ತಾಲ್ಲೂಕು.
ಎರ್ನಾಕುಲಂ ಜಿಲ್ಲೆ. ಕೇರಳ ರಾಜ್ಯ.
2) ಅನಿಲ್ ಡೊಮಿನಿಕ್ (28 ವರ್ಷ) ಬಿನ್ ಡೊಮಿನಿಕ್
ಲಾಲ್‌ವೇರಿ ಮನೆ, ಕಿರುಘೂಪುಚ್ ಗ್ರಾಮ, ಅಲುವಾ ತಾಲ್ಲೂಕು,
ಎರ್ನಾಕುಲಂ ಜಿಲ್ಲೆ, ಕೇರಳ ರಾಜ್ಯ.

**ಪ್ರಕರಣದ ಮುಖ್ಯಾಂಶಗಳು:**

ಪೊಲೀಸು ಉಪ ನಿರೀಕ್ಷಕರು, ಉಳ್ಳಾಲ ಪೊಲೀಸು ಠಾಣೆರವರು ದಿನಾಂಕ: 26.06.2003 ರಂದು ಬೆಳಿಗ್ಗೆ 8.00 ಗಂಟೆಯ ಸಮಯದಲ್ಲಿ ತಮ್ಮ ಸಿಬ್ಬಂದಿಯೊಂದಿಗೆ ಮಂಗಳೂರು ತಾಲ್ಲೂಕು ತಲಪಾಡಿ ಕೆಳಗಿನ ಪೇಟೆಯಲ್ಲಿ ತಪಾಸಣೆ ಮಾಡುತ್ತಿರುವ ಸಂದರ್ಭದಲ್ಲಿ ರಾಷ್ಟ್ರೀಯ ಹೆದ್ದಾರಿ 17 ರಲ್ಲಿ ಮಂಗಳೂರು ಕಡೆಯಿಂದ ಕೇರಳ ಕಡೆಗೆ ಲಾರಿ ಸಂಖ್ಯೆ: ಕೆಎ-06-ಎ-3287ನ್ನು ತಪಾಸಣೆ ಮಾಡುವ ಸಲುವಾಗಿ ನಿಲ್ಲಿಸಲು ಸೂಚನೆ ನೀಡಿದಾಗ ಅದರ ಚಾಲಕ ಸದರಿ ವಾಹನವನ್ನು ನಿಲ್ಲಿಸದೇ ಇನ್ನಷ್ಟು ವೇಗವಾಗಿ ಚಲಾಯಿಸಿದ್ದು, ನಂತರ ಪೊಲೀಸು ಸಿಬ್ಬಂದಿಯವರು ಬೆನ್ನಟ್ಟಿ ತಪಾಸಣಾ ಕೇಂದ್ರದ ಬಳಿ ತಡೆದು ನಿಲ್ಲಿಸಿ, ಸದರಿ ಲಾರಿಯಲ್ಲಿದ್ದ ಸರಕಿನ ಬಗ್ಗೆ ವಿಚಾರಿಸಿದಾಗ ಸದರಿ ಚಾಲಕ ಮಲಯಾಳಿ ಭಾಷೆಯಲ್ಲಿ ಖಾಲಿಯೆಂದು ತಿಳಿಸಿದ್ದು, ಸಂಶಯದ ಮೇರೆಗೆ ಲಾರಿಯ ಬಾಡಿಯ ಒಳಗಡೆ ನೋಡಲಾಗಿ ಬಾಡಿಯ ತಳಭಾಗ ಮಟ್ಟದಿಂದ ಸುಮಾರು 1 ಅಡಿ ಎತ್ತರಕ್ಕೆ ಸಂಪೂರ್ಣ ಹಲಗೆಗಳನ್ನು ಅಳವಡಿಸಿ ಮುಚ್ಚಿದ್ದು ಈ ಬಗ್ಗೆ ಕೂಲಂಕುಷವಾಗಿ ವಿಚಾರಿಸಿದಾಗ ಲಾರಿಯ ಚಾಲಕ ಬಾಡಿಯ ಕೆಳಭಾಗದಲ್ಲಿ ಪ್ರತ್ಯೇಕ ಟ್ಯಾಂಕನ್ನು ಅಳವಡಿಸಿ ಅದರ ಮೇಲ್ಭಾಗಕ್ಕೆ ಮರದ ಹಲಗೆಗಳನ್ನು ಅಳವಡಿಸಿರುವುದು ಹಾಗೂ ಸದರಿ ಟ್ಯಾಂಕಿನಲ್ಲಿ ಸುಮಾರು 1600.000 ಲೀಟರು ಮದ್ಯಸಾರ ಇರುವುದು ಕಂಡು ಬಂತು. ನಂತರ ಸದರಿ ಲಾರಿಯ ಚಾಲಕನನ್ನು ವಿಚಾರಿಸಿದಾಗ ತಾನು ಮದ್ಯಸಾರವನ್ನು ಕೇರಳಕ್ಕೆ ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿರುವುದಾಗಿ ಹಾಗೂ ಸಾಗಾಣಿಕೆ ಮಾಡಲು ಯಾವುದೇ ದಾಖಲೆ ಪತ್ರಗಳನ್ನು ಹಾಜರುಪಡಿಸಿರುವುದಿಲ್ಲ. ನಂತರ ಲಾರಿಯ ಚಾಲಕನ ಹಾಗೂ ಸಹಾಯಕನ ಹೆಸರು ಮತ್ತು ವಿಳಾಸ ಕೇಳಲಾಗಿ ಶ್ಯಾಮ್ ಜೇಕಬ್ (31 ವರ್ಷ) ಬಿನ್ ಕೆ.ಪಿ. ಚಾಕೋ, ಕೊಚಿಪರಂಬ್ ಮನೆ, ಅಲುವಾ ತಾಲ್ಲೂಕು, ಕೇರಳ ರಾಜ್ಯ ಎಂದೂ, ಇನ್ನೊಬ್ಬ ಅನಿಲ್ ಡೊಮಿನಿಕ್ (28 ವರ್ಷ) ಬಿನ್ ಡೊಮಿನಿಕ್ ಲಾಲ್‌ವೇರಿ ಮನೆ, ಕಿರುಘೂಪುಚ್ ಗ್ರಾಮ, ಅಲುವಾ ತಾಲ್ಲೂಕು, ಎರ್ನಾಕುಲಂ ಜಿಲ್ಲೆ, ಕೇರಳ ರಾಜ್ಯ ಎಂದು ತಿಳಿಸಿರುತ್ತಾರೆ. ನಂತರ ಸದರಿ ಲಾರಿಯನ್ನು ಪರಿಶೀಲಿಸಿದಾಗ ಲಾರಿಯ ಕ್ಯಾಬಿನ್ ಮತ್ತು ಬಾಡಿಗೆ ಅಳವಡಿಸಿದ ಭಾಗದ ಕೆಳಗಡೆ ಅಂದರೆ ಚಾಲಕನ ಸೀಟಿನ ಹಿಂಭಾಗದಲ್ಲಿ 2 ಸಣ್ಣ ಹಲಗೆಗಳನ್ನು 2 ಬೋಲ್ಟ್‌ನಿಂದ ಅಳವಡಿಸಿದ್ದು, ಸದರಿ ಬೋಲ್ಟ್ ಹಾಗೂ ಹಲಗೆಗಳನ್ನು ಚಾಲಕನು ತೆಗೆದು ಅದರೊಳಗಡೆ ವಾಲ್ವ್ ಇದ್ದು ಇದರ ಮುಖಾಂತರ ಸ್ಪಿರಿಟನ್ನು ಹೊರತೆಗೆಯುವುದಾಗಿ ತಿಳಿಸಿರುತ್ತಾರೆ. ಸದರಿ ಮದ್ಯಸಾರವು ಅಂದಾಜು ಸುಮಾರು 1600.000 ಲೀಟರು ಸದರಿ ಟ್ಯಾಂಕಿನಲ್ಲಿ ಇರುತ್ತದೆ. ಸದರಿ ಟ್ಯಾಂಕಿನಿಂದ ಮಾದರಿ ಬಗ್ಗೆ 750 ಎಂ.ಎಲ್.ನ 3 ಬಾಟ್ಲುಗಳಲ್ಲಿ ತುಂಬಿಸಿ ಮುಚ್ಚಳ ಹಾಗೂ ಬಿಳಿ ಬಟ್ಟೆಯಿಂದ ಸುತ್ತಿ ಇದಕ್ಕೆ ಎಸ್.ಹೆಚ್.ಒ ಅರಗು ಸೀಲು ಮಾಡಿರುತ್ತಾರೆ. ಸದರಿ ಬಾಟ್ಲಿಗಳಿಗೆ ಪಂಚರ ಸಹಿ ಇರುವ ಚೀಟಿ ಅಂಟಿಸಿಲಾಯಿತು. ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿ, ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಲಾರಿ ಮತ್ತು ಮದ್ಯಸಾರವನ್ನು ಸರ್ಕಾರಕ್ಕೆ ವಶಪಡಿಸಿಕೊಂಡು ಆರೋಪಿಗಳನ್ನು ದಸ್ತಗಿರಿ ಮಾಡಿರುತ್ತಾರೆ. ಇದು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 11, 14ರ ರೀತ್ಯಾ ಉಲ್ಲಂಘನೆ ಹಾಗೂ

ಕಲಂ 32, 34 ಮತ್ತು 38(ಎ)ರ ರೀತ್ಯಾ ಶಿಕ್ಷಾರ್ಹವಾಗಿರುವುದರಿಂದ ಮೊಕದ್ದಮೆಯನ್ನು ತಕ್ಷೀರು ಸಂಖ್ಯೆ: 137/2003 ದಿನಾಂಕ: 26.6.2003ರ ಮೂಲಕ ದಾಖಲುಪಡಿಸಿ ಈ ಪ್ರಾಧಿಕಾರದ ಅನುಮತಿಯನ್ನು ಪಡೆದು ಮೊಕದ್ದಮೆಯ ದಾಖಲಾತಿಗಳನ್ನು ಜಪ್ತುಪಡಿಸಿದ್ದು ಸ್ವತ್ತುಗಳೊಂದಿಗೆ ಅಬಕಾರಿ ನಿರೀಕ್ಷಕರು, ಉಳ್ಳಾಲ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಉಳ್ಳಾಲ ವಲಯ ಇವರು ಪ್ರಕರಣದ ತನಿಖೆಯನ್ನು ಮುಂದುವರೆಸಿ ಜಪ್ತುಪಡಿಸಲಾಗಿರುವ ಮದ್ಯಸಾರದಿಂದ ರಾಸಾಯನಿಕ ಪರೀಕ್ಷೆಗಾಗಿ ತೆಗೆಯಲಾಗಿದ್ದ ಮಾದರಿ ಮದ್ಯಸಾರದ ಬಾಟ್ಲಿಗಳನ್ನು ರಾಸಾಯನಿಕ ವಿಶ್ಲೇಷಣೆಗಾಗಿ ರಾಸಾಯನಿಕ ತಜ್ಞರಿಗೆ ಕಳುಹಿಸಿದ್ದು ರಾಸಾಯನಿಕ ತಜ್ಞರ ವರದಿಯಂತೆ ಮದ್ಯಸಾರದ ತೀಕ್ಷ್ಣತೆಯು 66 ಒ.ಪಿ. ಯಾಗಿದ್ದು ಇದು ಮಾನವ ಸೇವನೆಗೆ ಯೋಗ್ಯವಾಗಿದೆ ಎಂದು ನೀಡಲಾದ ಅಭಿಪ್ರಾಯದ ಮೇರೆಗೆ ಹಾಗೂ ಸದ್ರಿ ಮದ್ಯಸಾರವನ್ನು ಕೋರಿ ಯಾವುದೇ ವ್ಯಕ್ತಿಯು ಅರ್ಜಿ ಸಲ್ಲಿಸದೇ ಇದ್ದುದರಿಂದ 1600.000 ಲೀಟರು ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮೆ: ಮೈಶುಗರ್ ಕಂಪೆನಿ ಸಾರಾಯಿ ಸಂಸ್ಕರಣಾ ಘಟಕ, ಪಡೀಲ್ ಇವರಿಗೆ ಸಾರಾಯಿ ತಯಾರಿಕೆಗಾಗಿ ಈ ಪ್ರಾಧಿಕಾರದ ಆದೇಶ ಸಂಖ್ಯೆ: ಎಸ್‌ಡಿಕೆ:645: ಡಿಟಿಸಿಆರ್:2002-03, ದಿನಾಂಕ: 15.7.2003ರ ಮೂಲಕ ಹಂಚಿಕೆ ಮಾಡಲಾಗಿದೆ.

ದಿನಾಂಕ: 19.7.2003 ರಂದು ಈ ಪ್ರಾಧಿಕಾರವು ಪ್ರಕರಣವನ್ನು ಪತ್ತೆ ಹಚ್ಚುವಲ್ಲಿ ಹಾಜರಿದ್ದು ಆರೋಪಿಗಳಾದ ಶ್ಯಾಮ್ ಜೇಕಬ್, ಬಿನ್ ಕೆ.ಪಿ. ಚಾಕೋ, ಕೊಚಿಪರಂಬು ಮನೆ, ಚುನಗಂಮ್ಮೆಲಿ ಅಂಚೆ, ಅಲುವಾ ತಾಲ್ಲೂಕು ಎರ್ನಾಕುಲಂ ಮತ್ತು ಅನಿಲ್ ಬಿನ್ ಡೊಮೆನಿಕ್, ಲಾಲ್‌ವೇರಿ ಮನೆ, ಅಲುವಾ ತಾಲ್ಲೂಕು, ಎರ್ನಾಕುಲಂ ಜಿಲ್ಲೆ, ಕೇರಳ ರಾಜ್ಯ ಇವರಿಗೆ ಕಾರಣ ಕೇಳಿ ನೋಟೀಸು ನೀಡಲಾಗಿದ್ದು ಸದ್ರಿ ನೋಟೀಸುಗಳು ಸ್ವೀಕೃತವಾಗದೇ ಹಿಂದಕ್ಕೆ ಬಂದಿರುತ್ತದೆ. ವಾಹನ ಮಾಲೀಕರ ಹೆಸರು ಮತ್ತು ವಿಳಾಸವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ತುಮಕೂರು ಇವರಿಗೆ ಪತ್ರ ಬರೆಯಲಾಗಿದ್ದು ಸಾರಿಗೆ ಅಧಿಕಾರಿಗಳು ತುಮಕೂರು ಇವರು ವಾಹನದ 'ಬಿ' ಎಕ್ಸ್‌ಟ್ರಾಕ್ಟ್ ನೀಡಿದ್ದು ಸಾರಿಗೆ ಅಧಿಕಾರಿಗಳು ವರದಿಯ ಪ್ರಕಾರ ವಾಹನ ಸಂಖ್ಯೆ: ಕೆಎ-06-ಎ-3287ರ ನೋಂದಣಿ ಸಂಖ್ಯೆಯು ಆಟೋರಿಕ್ಷಾ ಎಂದು ವರದಿ ಮಾಡಿರುತ್ತಾರೆ. ಈ ಕಾರಣದಿಂದ ಜಪ್ತುಪಡಿಸಲಾಗಿರುವ ವಾಹನ ಲಾರಿಗೆ ನಕಲಿ ಸಂಖ್ಯಾ ಫಲಕವನ್ನು ಅಳವಡಿಸಿರುವುದು ದೃಢಪಟ್ಟಿರುತ್ತದೆ.

ಸದರಿ ವಾಹನವನ್ನು ಜಪ್ತುಪಡಿಸಿ 5 ತಿಂಗಳು ಕಳೆದಿದ್ದರೂ ಯಾವುದೇ ವ್ಯಕ್ತಿಯು ವಾಹನವು ತನ್ನದೆಂದು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದ್ರಿ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನುಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಹಾಜರುಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸೊತ್ತುಗಳಾಗಿದ್ದಲ್ಲಿ ಅಂತಹ ವಸ್ತುಗಳನ್ನು ಕಲಂ 43(ಸಿ) ಅಡಿಯಲ್ಲಿ ಅಕ್ರಮ ಮದ್ಯವನ್ನು ಮತ್ತು ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ.

ಆದರೆ ಈ ಪ್ರಕರಣವು ದಾಖಲಾಗಿ 5 ತಿಂಗಳು ಕಳೆದಿದ್ದರೂ ವಾಹನವು ತನ್ನದೆಂದು ವಾಹನದ ಬಿಡುಗಡೆಗೆ ಕೋರಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ ಮತ್ತು ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಮೇಲಾಗಿ ಈ ಪ್ರಕರಣದಲ್ಲಿ ಜಪ್ತುಪಡಿಸಿರುವ ವಾಹನದಲ್ಲಿ ಅಕ್ರಮ ಮದ್ಯಸಾರದ ಸಾಗಣೆಗೆಂದೇ ಲಾರಿಯ ಬಾಡಿಯ ತಳಭಾಗದಲ್ಲಿ ಒಂದು ಅಡಿಯಷ್ಟು ಎತ್ತರದ ವಿಸ್ತೀರ್ಣದಲ್ಲಿ ಟ್ಯಾಂಕನ್ನು ಅಳವಡಿಸಿ ಅದರ ಮೇಲೆ ಹಲಗೆಗಳನ್ನು ಮುಚ್ಚಿದ್ದು ಮತ್ತು ವಾಹನಕ್ಕೆ ನಕಲಿ ಸಂಖ್ಯಾ ಫಲಕವನ್ನು ಅಳವಡಿಸಿದ್ದು ಇದು ಕಳ್ಳ ಸಾಗಾಣಿಕೆಗೆ ಮಾಡಲೆಂದೇ ನಿರ್ಮಿಸಿರುವುದು ದೃಢಪಟ್ಟಿರುತ್ತದೆ.

ಈ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ: 26.6.2000 ರಂದು ಉಳ್ಳಾಲ ಪೊಲೀಸು ಉಪ ನಿರೀಕ್ಷಕರು, ಅಕ್ರಮವಾಗಿ ಸಾಗಾಣೆ ಮಾಡುತ್ತಿದ್ದ 1600.000 ಲೀಟರು ಮದ್ಯಸಾರವನ್ನು ಪತ್ತೆ ಹಚ್ಚಿ, ಸ್ಥಳ ಮಹಜರಿನೊಂದಿಗೆ ಅಕ್ರಮ ಮದ್ಯಸಾರವನ್ನು ಮತ್ತು ಮದ್ಯಸಾರ ಸಾಗಾಣೆಗೆ ಬಳಸಲಾಗಿದ್ದ ವಾಹನವನ್ನು ಜಪ್ತಿಪಡಿಸಿರುತ್ತಾರೆ. ಜಪ್ತುಪಡಿಸಿರುವ ದ್ರವ್ಯವು ರಾಸಾಯನಿಕ ತಜ್ಞರ ಪ್ರಕಾರ ಮದ್ಯಸಾರವೆಂದು ದೃಢಪಟ್ಟಿರುತ್ತದೆ. ಈ ಮೇಲಿನ ಹಿನ್ನಲೆಯಲ್ಲಿ ಈ ಪ್ರಕರಣದ ಆರೋಪಿಗಳು ಕಾನೂನು ಬಾಹಿರ ಕೃತ್ಯವನ್ನು ಎಸಗಿರುವುದೂ, ಅಕ್ರಮ ಮದ್ಯಸಾರವನ್ನು ಸಾಗಾಣೆ ಮಾಡಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಬೀತಾಗಿರುತ್ತದೆ. ಅಲ್ಲದೇ ಸದ್ರಿ ಲಾರಿಯಲ್ಲಿ ಗುಪ್ತ ಟ್ಯಾಂಕನ್ನು ಅಳವಡಿಸಿದ್ದು ಈ ಕೃತ್ಯವು ವಾಹನ ಮಾಲೀಕರ ತಿಳುವಳಿಕೆಯಿಂದಲೇ ನಡೆದಿದೆ ಎಂದೂ ಸ್ಪಷ್ಟವಾಗಿ ಸಾಬೀತಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಸದರಿ ಪ್ರಕರಣದಲ್ಲಿ ವಾಹನ ಮತ್ತು ಅಕ್ರಮ ಮದ್ಯಸಾರವನ್ನು ಜಪ್ತುಪಡಿಸಿ 5 ತಿಂಗಳು ಕಳೆದಿದ್ದರೂ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನವನ್ನು ಬಿಡುಗಡೆಗೆ ಕೋರಿ ಅರ್ಜಿ ಸಲ್ಲಿಸದೇ ಇರುವುದರಿಂದ ಈ ಕೃತ್ಯವು ವಾಹನ ಮಾಲೀಕನ ತಿಳುವಳಿಕೆಯಿಂದಲೇ ನಡೆದಿದೆ ಎಂದು ಭಾವಿಸಬಹುದಾಗಿದೆ. ಜಪ್ತುಪಡಿಸಿದ ವಾಹನವನ್ನು ತೆರೆದ ಜಾಗದಲ್ಲಿ ಇಟ್ಟಿರುವುದರಿಂದ ಮಳೆ ಬಿಸಿಲು, ಮುಂತಾದ ಹವಾಮಾನದ ವೈಪರೀತ್ಯದಿಂದ ವಾಹನವು ಹಾಳಾಗುವ ಸಾಧ್ಯತೆಗಳು ಇರುವುದರಿಂದ ಹಾಗೂ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತ ಎಂದು ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಂಡು ಈ ಆದೇಶ.

**ಆದೇಶ**

ಗೋವಿಂದಪ್ಪ, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43(ಎ) ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 43(ಬಿ)ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಕಲಂ 43(ಸಿ) ರನ್ವಯ ಪೊಲೀಸ್ ಉಪ ನಿರೀಕ್ಷಕರು, ಉಳ್ಳಾಲ ಪೊಲೀಸ್ ಠಾಣೆ,

ಉಳ್ಳಾಲ ಇವರ ಮೊಕದ್ದಮೆ ಸಂಖ್ಯೆ: 137/2003 ದಿನಾಂಕ: 26.6.2003 ರಲ್ಲಿ ವಶಪಡಿಸಿಕೊಂಡಿರುವ ವಾಹನ ಲಾರಿ ಸಂಖ್ಯೆ: ಕೆಎ-06-ಎ-3287ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 13.11.2003 ರಂದು ಶೀಘ್ರಲಿಪಿಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚುಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಗೋವಿಂದಪ್ಪ**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್. 1312

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರವರ ನ್ಯಾಯಾಲಯ, ಮಂಡ್ಯ ಉಪವಿಭಾಗ-2, 2ನೇ ಕ್ರಾಸ್, ಬಂದೀಗೌಡ ಬಡಾವಣೆ, ಮಂಡ್ಯ-571 401**

**ಪ್ರಕರಣದ ಸಂಖ್ಯೆ: ಕಾಅಿಮಂ-2:ಡಬ್ಲ್ಯೂಸಿಎ:ಮರಣ:97/2003**

| **ಅರ್ಜಿದಾರರು** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| 1) ಶ್ರೀಮತಿ ಸಾವಿತ್ರಮ್ಮ ಕೋಂ ರಾಮಬೋವಿ<br>2) ದೇವರಾಜು ಬಿನ್ ರಾಮಬೋವಿ<br>3) ಮುನಿಯಮ್ಮ ಬಿನ್ ರಾಮಬೋವಿ<br>4) ಯಶೋಧ ಬಿನ್ ರಾಮಬೋವಿ<br>ಕುಂಬಾರ ಕೊಪ್ಪಲು ವಿಲೇಜ್, ಗುಂಡೇನಹಳ್ಳಿ ಪೋಸ್ಟ್, ಬಿಂಡಿಗನವಿಲೆ ಹೋಬಳಿ, ನಾಗಮಂಗಲ ತಾಲ್ಲೂಕು. | | 1) ಮುದ್ದೆಗೌಡ ಬಿನ್ ಸಣ್ಣತಿಮ್ಮೆಗೌಡ ದೊಡ್ಡೇನಹಳ್ಳಿ ವಿಲೇಜ್, ಬಿಂಡಿಗನವಿಲೆ ಹೋಬಳಿ, ನಾಗಮಂಗಲ ತಾಲ್ಲೂಕು<br>2) ತಿಮ್ಮೆಗೌಡ ಬಿನ್ ಸಣ್ಣತಿಮ್ಮೆಗೌಡ, ದೊಡ್ಡೇನಹಳ್ಳಿ ವಿಲೇಜ್, ಬಿಂಡಿಗನವಿಲೆ ಹೋಬಳಿ, ನಾಗಮಂಗಲ ತಾಲ್ಲೂಕು<br>3) ಬ್ರಾಂಚ್ ಮ್ಯಾನೇಜರ್, ನ್ಯಾಷನಲ್ ಇನ್ಶೂರೆನ್ಸ್ ಕಂ. ಲಿ., ವಿ.ವಿ.ರಸ್ತೆ, ಮಂಡ್ಯ. |

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 4.8.2003 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ರಾಮಬೋವಿ ಅವರು ಮೇಲೆ ವಿಳಾಸಿಸಿರುವ ಎರಡನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಒಂದು, ಎರಡು ಹಾಗೂ ಮೂರನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,
ಮಂಡ್ಯ ಉಪವಿಭಾಗ-2, ಮಂಡ್ಯ.

ಪಿ.ಆರ್. 1314

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ:574:ಡಿಟಿಸಿಆರ್:2002-2003, ದಿನಾಂಕ: 17ನೇ ನವೆಂಬರ್ 2003**

**ಉಪಸ್ಥಿತರು:** ಗೋವಿಂದಪ್ಪ
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದ.ಕ.ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು:** | **ವಿರುದ್ಧ** | **ಆರೋಪಿಗಳು:** |
|---|---|---|
| ಅಬಕಾರಿ ಉಪ ನಿರೀಕ್ಷಕರು,<br>ನಂ.3, ಅಬಕಾರಿ ಗುಪ್ತ ವಾರ್ತಾದಳ,<br>ಮಂಗಳೂರು ವಿಭಾಗ, ಮಂಗಳೂರು. | | 1) ವಾಹನ ಚಾಲಕ ಪರಾರಿಯಾಗಿರುತ್ತಾರೆ.<br>2) ಶ್ರೀ ಪಿ.ಎಂ. ಮೊನುದ್ದೀನ್ ಬಿನ್ ಆರ್.ವಿ. ಮೆಮ್ಮೋತಿ, ಪುದಿಯ ವಿಟ್ಟಿಲ್ ಮಂಜಿಲ್, ವಟ್ಟೆಕಡೆ ಅಂಚೆ, ತ್ರಿಶೂರ್, ಕೇರಳ ರಾಜ್ಯ. (ಆರ್.ಸಿ. ಪುಸ್ತಕದ ಆಧಾರದ ಮೇರೆಗೆ) |

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಉಪ ನಿರೀಕ್ಷಕರು, ನಂ.3 ಅಬಕಾರಿ ಗುಪ್ತ ವಾರ್ತಾದಳ, ಮಂಗಳೂರು ವಿಭಾಗ, ಮಂಗಳೂರುರವರು ದಿನಾಂಕ: 27.04.2003 ರಂದು ಮುಂಜಾನೆ 4.30 ಗಂಟೆಯ ಸಮಯದಲ್ಲಿ ತಮ್ಮ ಸಿಬ್ಬಂದಿಯೊಂದಿಗೆ ಮಂಗಳೂರು ನಗರದ ಕದ್ರಿ ಪಾಲಿಟೆಕ್ನಿಕ್‌ನ ಎದುರಿಗಿರುವ ಮಂಗಳೂರು ಸರ್ವಿಸ್ ಸೆಂಟರ್ ಪೆಟ್ರೋಲ್ ಪಂಪ್‌ನ ಮುಂಭಾಗದ ರಾಷ್ಟ್ರೀಯ ಹೆದ್ದಾರಿ 18 ರಲ್ಲಿ ಒಂದು ಮಿನಿ ಲಾರಿ

ಸಂಖ್ಯೆ: ಕೆಎಲ್-8-ಡಬ್ಲ್ಯೂ-7089 ನಿಂತಿದ್ದು ಅನುಮಾನಗೊಂಡು ಅದನ್ನು ತಪಾಸಣೆ ಮಾಡಲು, ಅದರ ಚಾಲಕ ಹಾಗೂ ಸಹಾಯಕ ಲಾರಿಯಲ್ಲಿ ಇಲ್ಲದ ಕಾರಣ ಸದರಿ ಲಾರಿಯಿಂದ ಮದ್ಯಸಾರದ ವಾಸನೆ ಬರುತ್ತಿದ್ದು, ಇದರಿಂದ ಅನುಮಾನಗೊಂಡು ಲಾರಿಯ ಶೋಧನೆ ಬಗ್ಗೆ ಸ್ಥಳೀಯ ಸಾಕ್ಷಿದಾರರಿಗೆ ಪ್ರಯತ್ನಿಸಲಾಗಿ ಯಾರೂ ಸಿಗದ ಕಾರಣ ಹಾಗೂ ಸದರಿ ವಾಹನದ ತಪಾಸಣೆಗೆ ನ್ಯಾಯಾಲಯದ ವಾರಂಟ್ ತರಲು ಕಾಲಾವಕಾಶ ಇಲ್ಲದ ಕಾರಣ ಸರ್ಚ್ ಮೆಮೋವನ್ನು ತಯಾರಿಸಿ, ಸಾಕ್ಷಿಗಾಗಿ ತಮ್ಮ ಸಿಬ್ಬಂದಿಯವರನ್ನೇ ಬರಮಾಡಿಕೊಂಡು ವಾಹನ ಶೋಧನೆ ಮಾಡಲಾಯಿತು. ಸದರಿ ಲಾರಿಯನ್ನು ಪರಿಶೀಲಿಸಿದಾಗ ಸದರಿ ಲಾರಿಯಲ್ಲಿ ಮಂಜುಗಡ್ಡೆ ಮತ್ತು ಮೀನು ಇರುವ ಪ್ಲಾಸ್ಟಿಕ್ ಕ್ರೇಟ್‌ಗಳು ಮೇಲ್ಭಾಗದಲ್ಲಿ ಕಂಡು ಬಂತು. ಸದರಿ ಪ್ಲಾಸ್ಟಿಕ್ ಕ್ರೇಟ್‌ಗಳ ಅಡಿಯಲ್ಲಿ 35.000 ಲೀಟರ್ ಗಾತ್ರದ 30 ಪ್ಲಾಸ್ಟಿಕ್ ಕ್ಯಾನ್‌ಗಳು ಇದ್ದು, ಸದರಿ ಕ್ಯಾನ್‌ಗಳಲ್ಲಿ ಮದ್ಯಸಾರ ತುಂಬಿರುವುದು ಕಂಡು ಬಂತು. ನಂತರ ಸದರಿ ಲಾರಿಯ ಕ್ಯಾಬಿನ್‌ನಲ್ಲಿ ಮದ್ಯಸಾರಕ್ಕೆ ಸಂಬಂಧಪಟ್ಟ ದಾಖಲಾತಿಗಳನ್ನು ಹುಡುಕಲಾಗಿ, ಯಾವುದೇ ದಾಖಲಾತಿಗಳು ದೊರಕದೆ ವಾಹನದ ಆರ್.ಸಿ. ಪುಸ್ತಕ ದೊರೆತ್ತಿರುತ್ತದೆ. ಆದುದರಿಂದ ಇದೊಂದು ಅಕ್ರಮ ಮದ್ಯಸಾರ ಸಾಗಾಟ ಎಂದು ತಿಳಿದು, ವಾಹನದಲ್ಲಿದ್ದ 30 ಪ್ಲಾಸ್ಟಿಕ್ ಕ್ಯಾನ್‌ನಿಂದ ರಾಸಾಯನಿಕ ಪರೀಕ್ಷೆಗಾಗಿ 180 ಎಂ.ಎಲ್.ನ ಎರಡು ಸೀಸೆಯಂತೆ ಒಟ್ಟು 60 ಸೀಸೆ ಮದ್ಯಸಾರವನ್ನು ತುಂಬಿಸಿ, ಸದರಿ ಸೀಸೆಗಳಿಗೆ ಮತ್ತು ಉಳಿದ ಮದ್ಯಸಾರ ಕ್ಯಾನ್‌ಗಳಿಗೆ ಬಟ್ಟೆದಾರ ಸುತ್ತಿ ಮೊಹರು ಮಾಡಲಾಯಿತು. ರಾಸಾಯನಿಕ ಮಾದರಿ ಸೀಸೆಗಳಿಗೆ ಗುರುತಿನ ಚೀಟಿಗಳನ್ನು ಅಂಟಿಸಿರುತ್ತಾರೆ. ಮತ್ತು ಮದ್ಯಸಾರ ಇದ್ದ ಉಳಿದ ಕ್ಯಾನ್‌ಗಳಿಗೆ ಗುರುತಿನ ಸಂಖ್ಯೆಯನ್ನು ಬರೆದು ಮೊಹರಿನ ನಮೂನೆಯನ್ನು ತಯಾರಿಸಿರುತ್ತಾರೆ. ನಂತರ ಸದರಿ ಲಾರಿಯನ್ನು ಪರಿಶೀಲಿಸಿದಾಗ ಅದರ ನೋಂದಣಿ ಸಂಖ್ಯೆ: ಕೆಎಲ್-8-ಡಬ್ಲ್ಯೂ-7089 ಆಗಿದ್ದು ಇದರ ಇಂಜಿನ್ ನಂ: ಇ483ಎ, 21182238 ಮತ್ತು ಚಾಸೀಸ್ ನಂ: 11ಇಸಿ, 21187344 ಆಗಿರುತ್ತದೆ. ಸದರಿ ಲಾರಿಯಲ್ಲಿದ್ದ ಕೊಳೆತ ಮೀನು ಮತ್ತು ಮಂಜುಗಡ್ಡೆಯನ್ನು ಸ್ಥಳದಲ್ಲಿಯೇ ನಾಶಪಡಿಸಿರುತ್ತಾರೆ. ಲಾರಿ ಮತ್ತು ಅದರಲ್ಲಿದ್ದ ಮದ್ಯಸಾರವನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿರುತ್ತಾರೆ. ಇದು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 11, 13 ಮತ್ತು 14ರ ರೀತ್ಯಾ ಉಲ್ಲಂಘನೆ ಹಾಗೂ ಕಲಂ 32, 34 ಮತ್ತು 38(ಎ)ರ ರೀತ್ಯಾ ಶಿಕ್ಷಾರ್ಹವಾಗಿರುವುದರಿಂದ ಮೊಕದ್ದಮೆ ಸಂಖ್ಯೆ: 26/2002-03 ದಿನಾಂಕ: 27.04.2003 ರಂದು ಮೊಕದ್ದಮೆ ದಾಖಲು ಮಾಡಿ ಮುಂದಿನ ಸೂಕ್ತ ಕ್ರಮಕ್ಕಾಗಿ ಅಬಕಾರಿ ನಿರೀಕ್ಷಕರು, ಕದ್ರಿ ವಲಯರವರಿಗೆ ಹಸ್ತಾಂತರಿಸಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು, ಇ.ಐ.ಬಿ. ಮಂಗಳೂರು ವಿಭಾಗ ಇವರು ಸದ್ರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮದ್ಯಸಾರದಿಂದ ತೆಗೆಯಲಾದ ಮದ್ಯಸಾರದ ಮಾದರಿ ಶೀಷೆಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಿದ್ದು ರಾಸಾಯನಿಕ ತಜ್ಞರ ವರದಿ ಸಂಖ್ಯೆ: ಇ 371-30 ದಿನಾಂಕ: 7.5.2003ರ ಪ್ರಕಾರ ಮದ್ಯಸಾರದ ತೀಕ್ಷ್ಣತೆಯು $65^0$ ಒ.ಪಿ. ಯಾಗಿದ್ದು ಇದು ಮಾನವನ ಸೇವನೆಗೆ ಯೋಗ್ಯವಾಗಿರುತ್ತದೆ ಎಂದು ದೃಢೀಕರಣ ಪತ್ರವನ್ನು ನೀಡಿದ್ದು, ಸದ್ರಿ ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಮಾಡಿದ ಶಿಫಾರಸ್ಸಿನ ಮೇರೆಗೆ ಈ ಪ್ರಾಧಿಕಾರವು ದಿನಾಂಕ: 13.5.2003 ರಂದು ವಶಪಡಿಸಿಕೊಂಡ 1,050,000 ಲೀಟರ್ ಮದ್ಯಸಾರವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮೆ: ಮೈಶುಗರ್ ಕಂಪೆನಿ, ಸಾರಾಯಿ ಸಂಸ್ಕರಣಾ ಘಟಕ, ಪಡೀಲ್ ಇವರಿಗೆ ಸಾರಾಯಿ ತಯಾರಿಕೆಗಾಗಿ ಹಂಚಿಕೆ ಮಾಡಲಾಗಿದೆ.

ದಿನಾಂಕ: 13.6.2003 ರಂದು ಈ ಪ್ರಾಧಿಕಾರವು ವಾಹನದ ಮಾಲೀಕರ ಹೆಸರು ಮತ್ತು ವಿಳಾಸವನ್ನು ಪತ್ತೆ ಹಚ್ಚಲು ಸಾರಿಗೆ ಅಧಿಕಾರಿಗಳು ತ್ರಿಶೂರು, ಕೇರಳ ಜಿಲ್ಲೆ ಇವರಿಗೆ ಪತ್ರವನ್ನು ಬರೆಯಲಾಗಿದ್ದು ಈವರೆಗೆ ಸದ್ರಿ ಸಾರಿಗೆ ಅಧಿಕಾರಿಗಳಿಂದ ಯಾವುದೇ ವರದಿ ಬಂದಿರುವುದಿಲ್ಲ. ಪ್ರಕರಣವನ್ನು ಪತ್ತೆ ಹಚ್ಚುವಾಗ ಜಪ್ತುಪಡಿಸಲಾದ ಆರ್.ಸಿ. ಪುಸ್ತಕದ ಪ್ರಕಾರ ವಾಹನ ಮಾಲೀಕರು ಶ್ರೀ ಪಿ.ಎಂ. ಮೊೖನುದ್ದೀನ್, ಬಿನ್ ಆರ್.ವಿ. ಮೆಮ್ಮೋತಿ, ಪುದಿಯ ವಿಟ್ಟಿಲ್ ಮಂಜಿಲ್, ವಟ್ಟೆಕಡೆ ಅಂಚೆ, ತ್ರಿಶೂರ್, ಕೇರಳ ಎಂದು ತಿಳಿದು ಬಂದಿದ್ದು ವಾಹನ ಮಾಲೀಕರಿಗೆ ದಿನಾಂಕ: 13.6.2003 ರಂದು ಮತ್ತು 2.8.2003 ರಂದು ಕಾರಣ ಕೇಳಿ ನೋಟೀಸನ್ನು ನೀಡಲಾಗಿದ್ದು ವಾಹನ ಮಾಲೀಕರಾದ ಶ್ರೀ ಪಿ.ಎಂ. ಮೊೖನುದ್ದೀನ್ ಇವರು ನೋಟೀಸನ್ನು ದಿನಾಂಕ: 11.8.2003 ರಂದು ಪಡೆದಿದ್ದು ಸ್ವೀಕೃತಿ ಪತ್ರವು ದಿನಾಂಕ: 17.8.2003 ರಂದು ಈ ಪ್ರಾಧಿಕಾರಕ್ಕೆ ತಲುಪಿರುತ್ತದೆ. ವಾಹನವನ್ನು ಜಪ್ತುಪಡಿಸಿ ಸುಮಾರು 6 ತಿಂಗಳು ಕಳೆದಿದ್ದರೂ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನವು ತನ್ನದೆಂದು ಕೋರಿ ಅರ್ಜಿ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರು ಈ ಪ್ರಾಧಿಕಾರವು ನೀಡಿದ್ದ ನೋಟೀಸನ್ನು ಸ್ವೀಕರಿಸಿ 3 ತಿಂಗಳು ಕಳೆದಿದ್ದರೂ ಈವರೆಗೆ ವಾಹನದ ಬಿಡುಗಡೆಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದ್ರಿ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನುಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಹಾಜರುಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸೊತ್ತುಗಳಾಗಿದ್ದಲ್ಲಿ ಅಂತಹ ವಸ್ತುಗಳನ್ನು ಕಲಂ 43(ಸಿ) ಅಡಿಯಲ್ಲಿ ಅಕ್ರಮ ಮದ್ಯವನ್ನು ಮತ್ತು ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ.

ಆದರೆ ಈ ಪ್ರಕರಣವು ದಾಖಲಾಗಿ 6 ತಿಂಗಳು ಕಳೆದಿದ್ದರೂ ಯಾವುದೇ ವ್ಯಕ್ತಿಯು ವಾಹನವು ತನ್ನದೆಂದು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಈ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ 27.4.2003 ರಂದು ಸದರಿ ಲಾರಿಯಲ್ಲಿ ಅಕ್ರಮವಾಗಿ 1,050.000 ಲೀಟರ್ ಮದ್ಯಸಾರವನ್ನು ಸಾಗಾಣಿಕೆ ಮಾಡುತ್ತಿದ್ದುದನ್ನು ಅಬಕಾರಿ ಉಪ ನಿರೀಕ್ಷಕರು, ಗುಪ್ತ ವಾರ್ತಾದಳ, ಮಂಗಳೂರು ಇವರು ಪತ್ತೆ ಹಚ್ಚಿ, ಸ್ಥಳ ಮಹಜರಿನೊಂದಿಗೆ ಅಕ್ರಮ ಮದ್ಯಸಾರವನ್ನು ಮತ್ತು ಮದ್ಯಸಾರ ಸಾಗಾಣಿಕೆಗೆ ಬಳಸಲಾಗಿದ್ದ ವಾಹನವನ್ನು ಜಪ್ತಿಪಡಿಸಿರುತ್ತಾರೆ. ಜಪ್ತುಪಡಿಸಿರುವ ದ್ರವ್ಯವು ರಾಸಾಯನಿಕ ತಜ್ಞರ ಪ್ರಕಾರ ಮದ್ಯಸಾರವೆಂದು ದೃಢಪಟ್ಟಿರುತ್ತದೆ. ಈ ಮೇಲಿನ ಹಿನ್ನೆಲೆಯಲ್ಲಿ

ಪರಾರಿಯಾಗಿರುವ ಆರೋಪಿಯು ಕಾನೂನುಬಾಹಿರ ಕೃತ್ಯವನ್ನು ಎಸಗಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಬೀತಾಗಿರುತ್ತದೆ. ಮತ್ತು ಅಕ್ರಮ ಮದ್ಯಸಾರ ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಸದರಿ ಪ್ರಕರಣದಲ್ಲಿ ವಾಹನ ಮತ್ತು ಅಕ್ರಮ ಮದ್ಯಸಾರವನ್ನು ಜಪ್ತುಪಡಿಸಿ ಸುಮಾರು 6 ತಿಂಗಳು ಕಳೆದಿದ್ದರೂ ಸದರಿ ಸೊತ್ತುಗಳಿಗೆ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗದೆ ಇರುವುದರಿಂದ ಈ ಕೃತ್ಯವು ವಾಹನ ಮಾಲೀಕನ ತಿಳುವಳಿಕೆಯಿಂದಲೇ ನಡೆದಿದೆ ಎಂದು ಭಾವಿಸಬಹುದಾಗಿದೆ. ಜಪ್ತುಪಡಿಸಿದ ವಾಹನವನ್ನು ತೆರೆದ ಜಾಗದಲ್ಲಿ ಇಟ್ಟಿರುವುದರಿಂದ ಮಳೆ ಬಿಸಿಲು, ಮುಂತಾದ ಹವಾಮಾನದ ವೈಪರೀತ್ಯದಿಂದ ವಾಹನವು ದಿನೇ ದಿನೇ ತನ್ನ ಗುಣಮಟ್ಟವನ್ನು ಕಳೆದುಕೊಳ್ಳುವ ಹಾಗೂ ಹಾಳಾಗುವ ಸಾಧ್ಯತೆಗಳು ಇರುವುದರಿಂದ ಹಾಗೂ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಸದರಿ ವಾಹನವನ್ನು ಮತ್ತು ಪ್ಲಾಸ್ಟಿಕ್ ಕ್ಯಾನ್, ಖಾಲಿ ಪ್ಲಾಸ್ಟಿಕ್ ಕ್ರೇಟ್, ವಾಹನದ ಬಿಡಿ ಚಕ್ರ, ಟರ್ಪಾಲ್ ಮತ್ತು ಹಗ್ಗವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತ ಎಂದು ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಂಡು ಈ ಆದೇಶ

**ಆದೇಶ**

ಗೋವಿಂದಪ್ಪ ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43(ಎ) ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 43(ಬಿ)ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಕಲಂ 43(ಸಿ) ರನ್ವಯ ಅಬಕಾರಿ ಉಪ ನಿರೀಕ್ಷಕರು, ನಂ.3 ಇ.ಐ.ಬಿ., ಮಂಗಳೂರು ವಿಭಾಗ, ಮಂಗಳೂರು ಇವರ ಮೊಕದ್ದಮೆ ಸಂಖ್ಯೆ: 26/2002-03 ದಿನಾಂಕ: 27.04.2003 ರಲ್ಲಿ ವಶಪಡಿಸಿಕೊಂಡಿರುವ ವಾಹನ ಲಾರಿ ಸಂಖ್ಯೆ: ಕೆಎಲ್-8-ಡಬ್ಲ್ಯೂ-7089ನ್ನು ಮತ್ತು 35.000 ಲೀಟರ್ ಗಾತ್ರದ 30 ಖಾಲಿ ಪ್ಲಾಸ್ಟಿಕ್ ಕ್ಯಾನ್‌ಗಳು, 40 ಖಾಲಿ ಪ್ಲಾಸ್ಟಿಕ್ ಕ್ರೇಟ್‌ಗಳು, ವಾಹನದ ಬಿಡಿ ಚಕ್ರ-1, ಟರ್ಪಾಲ್ ಮತ್ತು ಹಗ್ಗವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 17.11.2003 ರಂದು ಶೀಘ್ರಲಿಪಿಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚುಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಗೋವಿಂದಪ್ಪ**

ಪಿ.ಆರ್. 1313

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರವರ ನ್ಯಾಯಾಲಯ, ಮಂಡ್ಯ ಉಪವಿಭಾಗ-2,**
**2ನೇ ಕ್ರಾಸ್, ಬಂದೀಗೌಡ ಬಡಾವಣೆ, ಮಂಡ್ಯ-571 401**
**ಪ್ರಕರಣದ ಸಂಖ್ಯೆ: ಕಾಅಮಂ-2:ಡಬ್ಲ್ಯೂಸಿಎ:ಮರಣ:96/2003**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

ಅರ್ಜಿದಾರರು:
1) ಚಿಕ್ಕಮರೀಗೌಡ ಬಿನ್ ಮರೀಗೌಡ
2) ಚಿಕ್ಕ ಹೊಂಬಮ್ಮ ಕೋಂ ಚಿಕ್ಕಮರಿಗೌಡ
3) ಭಾಗ್ಯಮ್ಮ ಕೋಂ ಸಿ. ಕೃಷ್ಣ
4) ಕು: ಲಕ್ಷ್ಮಿ ಬಿನ್ ಸಿ. ಕೃಷ್ಣ
5) ಕು: ರಶ್ಮಿ ಬಿನ್ ಸಿ. ಕೃಷ್ಣ
6) ಚಿ: ಸುನೀಲ್ ಬಿನ್ ಸಿ. ಕೃಷ್ಣ
ವಾಸ: ಚಿಕ್ಕೋನಹಳ್ಳಿ ವಿಲೇಜ್, ಕೊಪ್ಪ ಹೋಬಳಿ,
ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ.

ಪ್ರತಿವಾದಿಗಳು:
1) ಜಿ. ನಾಗರಾಜ್,
ನಂ.137/9, 4ನೇ ಮೈನ್, 9ನೇ ಕ್ರಾಸ್, ಬಾಪೂಜಿನಗರ,
ಮೈಸೂರು ರಸ್ತೆ, ಬೆಂಗಳೂರು-560 026.
2) ಬ್ರಾಂಚ್ ಮ್ಯಾನೇಜರ್,
ಓರಿಯೆಂಟಲ್ ಇನ್ಸೂರೆನ್ಸ್ ಕಂ. ಲಿ.,
ಕೆ.ಪಿ.ಟಿ.ಸಿ.ಎಲ್. ಎದುರು, ಎಂ.ಸಿ. ರಸ್ತೆ, ಮಂಡ್ಯ.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 12.10.2003 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಸಿ.ಕೃಷ್ಣ ಅವರು ಮೇಲೆ ವಿಳಾಸಿಸಿರುವ ಮೊದಲನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಒಂದು ಮತ್ತು ಎರಡನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,
ಮಂಡ್ಯ ಉಪವಿಭಾಗ-2, ಮಂಡ್ಯ.

ಪಿ.ಆರ್. 1315